# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೭, ೨೦೧೨ (ಆಶ್ವಯುಜ ೫, ಶಕ ವರ್ಷ ೧೯೩೪) | ಸಂಚಿಕೆ ೩೯ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರ್ಥಿಕ ಸಚಿವಾಲಯ

**ವಿಷಯ:** ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯಲ್ಲಿನ 08 ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಆಇ 123 ರಾಲೆಪ 2009(ಭಾಗ), ದಿನಾಂಕ:13.5.2011.

2) ನಿಯಂತ್ರಕರ ಪತ್ರ ಸಂಖ್ಯೆ:ರಾಲೆಪ 1 ಇಟಿಪಿ 90/2011 ದಿ:27.4.2012.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕುವೆಂಪು ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯ ಈ ಕೆಳಕಂಡ 08 ಹುದ್ದೆಗಳನ್ನು ದಿ:27.01.2011 ರಿಂದ 26.01.2012ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಆದೇಶ ನೀಡಲಾಗಿತ್ತು.

| | | |
|---|---|---|
| 01 | ಸರ್ಕಾರಿ ಲೆಕ್ಕಪರಿಶೋಧಕರು | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು | 01 |
| 03 | ಪ್ರಥಮ ದರ್ಜೆ ಸಹಾಯಕರು | 03 |
| 04 | ದ್ವಿತೀಯ ದರ್ಜೆ ಸಹಾಯಕರು | 01 |
| 05 | ಬೆರಳಚ್ಚುಗಾರರು | 01 |
| 06 | ಗ್ರೂಪ್ ಡಿ ನೌಕರರು | 01 |
| | **ಒಟ್ಟು** | **08** |

ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ರವರ ಪತ್ರದಲ್ಲಿ ಕುವೆಂಪು ವಿಶ್ವವಿದ್ಯಾಲಯದ ಲೆಕ್ಕ ತನಿಖಾ ಕಾರ್ಯವು ನಿರಂತರವಾಗಿ ನಡೆಯಬೇಕಾಗಿದ್ದು, ವಾರ್ಷಿಕ ತನಿಖಾ ವರದಿಯನ್ನು ಪ್ರತಿ ಸಾಲಿನಲ್ಲೂ ನಿಗದಿತ ಸಮಯದೊಳಗೆ ಜಾರಿಗೊಳಿಸಬೇಕಾಗಿರುತ್ತದೆ. ಇದರ ಜೊತೆಗೆ ವಿಶ್ವವಿದ್ಯಾಲಯ ಧನಸಹಾಯ ಆಯೋಗ, ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಹಾಗೂ ಇತರೆ ಅನುದಾನಿತ ಸಂಸ್ಥೆಗಳು ವಿಶ್ವವಿದ್ಯಾಲಯಕ್ಕೆ ನೀಡುವ ಅನುದಾನದ ವೆಚ್ಚ ವಿವರಗಳನ್ನು ಪರಿಶೀಲಿಸಿ ನಿಯಮಾನುಸಾರ ಪ್ರಮಾಣೀಕರಿಸಬೇಕಾಗುತ್ತದೆ. ಈ ಎಲ್ಲಾ ಅಂಶಗಳನ್ನು ಪರಿಗಣಿಸಿ ಮೇಲ್ಕಂಡ 08 ಹುದ್ದೆಗಳನ್ನು ಖಾಯಂಗೊಳಿಸಿ ಆದೇಶ ಹೊರಡಿಸುವಂತೆ ಅಥವಾ ಖಾಯಂಗೊಳಿಸುವ ಪ್ರಕ್ರಿಯೆ

ತಡವಾಗುವುದಿದ್ದಲ್ಲಿ ಸದ್ಯಕ್ಕೆ ದಿನಾಂಕ:27.1.2012ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 123 ರಾಲೆಪ 2009 ಬೆಂಗಳೂರು, ದಿನಾಂಕ:14.05.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕುವೆಂಪು ವಿಶ್ವವಿದ್ಯಾಲಯದಲ್ಲಿ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:27.01.2012 ರಿಂದ ಆರು ತಿಂಗಳವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಅನುಮೋದನೆ ನೀಡಲಾಗಿದೆ.

| | | |
|---|---|---|
| 01 | ಸರ್ಕಾರಿ ಲೆಕ್ಕಪರಿಶೋಧಕರು | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು | 01 |
| 03 | ಪ್ರಥಮ ದರ್ಜೆ ಸಹಾಯಕರು | 03 |
| 04 | ದ್ವಿತೀಯ ದರ್ಜೆ ಸಹಾಯಕರು | 01 |
| 05 | ಬೆರಳಚ್ಚುಗಾರರು | 01 |
| 06 | ಗ್ರೂಪ್ ಡಿ ನೌಕರರು | 01 |
| | **ಒಟ್ಟು** | **08** |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿ:10.7.1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರಿಯ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಲ್. ರಮೇಶ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**ಪಿ.ಆರ್. 1873**

## ವಸತಿ ಸಚಿವಾಲಯ

**ವಿಷಯ**- ಕೇಂದ್ರ ಪುರಸ್ಕೃತ ನರ್ಮ್ ಯೋಜನೆಯ ಐಹೆಚ್‌ಎಸ್‌ಡಿಪಿ ಯೋಜನೆ - ಕೇಂದ್ರ ಹಾಗೂ ರಾಜ್ಯ ಸರ್ಕಾರದ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ**=

1) ಆಯುಕ್ತರು, ಕ ಕೊ ಅ ಮ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಕೊಅಮ: JnNURM-IHSDP:2012-2013 : ದಿನಾಂಕ:21/05/2012
2) ಆರ್ಥಿಕ ಇಲಾಖೆಯ Credit Confirmation Slip ಸಂಖ್ಯೆ: FD/13/BGL/2009 ದಿನಾಂಕ: 29/12/2011
3) ಸರ್ಕಾರದ ಆದೇಶ ಸಂಖ್ಯೆ: ವಇ/12/ಕೊಮಂಲೆ/2009 ದಿನಾಂಕ: 30/03/2012
4) ಅರ್ಥಿಕ ಇಲಾಖೆಯ Credit Confirmation Slip ಸಂಖ್ಯೆ: FD/13/BGL/2009 ದಿನಾಂಕ: 30/03/2012
5) ಸರ್ಕಾರದ ಆದೇಶ ಸಂಖ್ಯೆ: ಎಫ್ ಡಿ:4:ಟಿಎಫ್‌ಪಿ:2012, ಬೆಂಗಳೂರು, ದಿನಾಂಕ:27/04/2012

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಇವರು ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯಡಿಯಲ್ಲಿ (IHSDP) ರಾಜ್ಯಾದ್ಯಂತ ವಿವಿಧ 34 ನಗರ : ಪಟ್ಟಣಗಳಲ್ಲಿ ಮನೆಗಳ ನಿರ್ಮಾಣ ಹಾಗೂ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಂಡಿದ್ದು, ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿರುತ್ತದೆ. ಸದರಿ ಯೋಜನೆಗೆ ಕೇಂದ್ರ ಸರ್ಕಾರದಿಂದ 2 ನೇ ಕಂತಿನ ಅನುದಾನದ ಶೇಕಡ 50 ರಷ್ಟು ಅನುದಾನವನ್ನು ಮೇಲೆ ಉಲ್ಲೇಖ (2) ರಲ್ಲಿ ತಿಳಿಸಲಾಗಿರುವ ಜಮಾ ಧೃಡೀಕರಣ ಪತ್ರದಲ್ಲಿ 6 ವಿವಿಧ : ನಗರ ಪಟ್ಟಣಗಳಿಗೆ ರೂ.1472.14 ಲಕ್ಷಗಳನ್ನು ರಾಜ್ಯ ಸರ್ಕಾರಕ್ಕೆ ಬಿಡುಗಡೆ ಮಾಡಿರುತ್ತದೆ. (ಶಿಡ್ಲಘಟ್ಟ, ಮುಳಬಾಗಿಲು, ದೊಡ್ಡಬಳ್ಳಾಪುರ, ಚಿಂಚೋಳಿ, ಗೌರಿಬಿದನೂರು ಮತ್ತು ಚಿಂತಾಮಣಿ) ಉಲ್ಲೇಖ (3) ರ ಸರ್ಕಾರದ

ಆದೇಶ ದಿನಾಂಕ:30-03-2012 ರಲ್ಲಿ ಕೇಂದ್ರ ಸರ್ಕಾರದ ಶೇಕಡ 50 ರಷ್ಟು ಅನುದಾನ ರೂ:1472.14 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡಿದ್ದು, ರಾಜ್ಯ ಸರ್ಕಾರದ ವಂತಿಗೆ ರೂ. 1115.14 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ. ಹಾಗೂ ಉಲ್ಲೇಖ (4) ರಲ್ಲಿತಿಳಿಸಲಾಗಿರುವ ಜಮಾ ಧೃಡೀಕರಣ ಪತ್ರದಲ್ಲಿ ರಾಮನಗರ ಪಟ್ಟಣದ ಯೋಜನೆಗೆ ಕೇಂದ್ರ ಸರ್ಕಾರದ 2 ನೇ ಕಂತಿನ ಅನುದಾನ ಶೇಕಡ 50 ರಷ್ಟು ರೂ. 827.15 ಲಕ್ಷಗಳನ್ನು ರಾಜ್ಯ ಸರ್ಕಾರಕ್ಕೆ ಬಿಡುಗಡೆ ಮಾಡಿರುತ್ತದೆ. ಸದರಿ ಮೊತ್ತಕ್ಕೆ ರಾಜ್ಯ ಸರ್ಕಾರದ ವಂತಿಗೆ ರೂ. 724.29 ಲಕ್ಷಗಳನ್ನು ಸೇರಿಸಿ ಒಟ್ಟಾರೆ ಮಂಡಳಿಗೆ (1115.14+827.15+724.29) ರೂ. 2666.58 ಲಕ್ಷಗಳನ್ನು ಬಿಡುಗಡೆ ಮಾಡಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ವಿವರಗಳು ಈ ಕೆಳಕಂಡಂತೆ ಇರುತ್ತದೆ-

| ಕ್ರಮ ಸಂಖ್ಯೆ | ವಿವರಗಳು | ಕೇಂದ್ರ ಸರ್ಕಾರದ ಅನುದಾನ | ರಾಜ್ಯ ಸರ್ಕಾರದ ಅನುದಾನ | ಒಟ್ಟು |
|---|---|---|---|---|
| **1** | 6 ನಗರ : ಪಟ್ಟಣಗಳಿಗೆ | 0.00 | 1115.14 | 1115.14 |
| **2** | ರಾಮನಗರ ಪಟ್ಟಣ | 827.15 | 724.29 | 1551.44 |
| | **ಒಟ್ಟು ಮೊತ್ತ** | **827.15** | **1839.43** | **2666.58** |

ಮೇಲೆ ಓದಲಾದ (5) ರ ಆರ್ಥಿಕ ಇಲಾಖೆಯ ಆದೇಶದಲ್ಲಿ JnNURM ಯೋಜನೆಗೆ ಭಾರತ ಸರ್ಕಾರದಿಂದ ಹಣ ಪಡೆಯುವ ಯೋಜನಾ ಕಾರ್ಯಕ್ರಮಗಳಿಗೆ ಸಂಭಂದಿಸಿದಂತೆ ಕೇಂದ್ರ ಸರ್ಕಾರದಿಂದ ಬಿಡುಗಡೆಯಾದ ಅನುದಾನಕ್ಕೆ ಜಮಾ ಧೃಡೀಕರಣ ಪತ್ರದಿಂದ ಧೃಡಪಟ್ಟನಂತರ ಆಡಳಿತ ಇಲಾಖೆಯು ಹಣ ಬಿಡುಗಡೆ ಮಾಡಲು ಆದೇಶ ನೀಡಲಾಗಿರುತ್ತದೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 32 ಕೊಮಂಲೆ 2012, ಬೆಂಗಳೂರು, ದಿನಾಂಕ 10-07-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯಡಿಯಲ್ಲಿ (IHSDP) 6 ವಿವಿಧ : ನಗರ ಪಟ್ಟಣಗಳಿಗೆ ಈಗಾಗಲೇ ಕೇಂದ್ರ ಸರ್ಕಾರದ ಅನುದಾನವನ್ನು ಬಿಡುಗಡೆ ಮಾಡಿದ್ದು, ಅದರಂತೆ ರಾಜ್ಯ ಸರ್ಕಾರದ ವಂತಿಗೆ ರೂ. 1115.14 ಲಕ್ಷಗಳನ್ನು (ಹನ್ನೊಂದು ಕೋಟಿ ಹದಿನೈದು ಲಕ್ಷದ ಹದಿನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಿದ್ದು, ಸದರಿ ಮೊತ್ತವನ್ನು 2012-2013 ನೇ ಸಾಲಿನ ಆಯವ್ಯಯದ ಕೆಳಗಿನ ಲೆಕ್ಕಶೀರ್ಷಿಗಳಿಂದ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

1. ಲೆಕ್ಕ ಶೀರ್ಷಿಕೆ 2217-04-191-2-03-106 – (IHSDP) ಯೋಜನೆ : ರೂ: 604.78 ಲಕ್ಷಗಳು
2. ಲೆಕ್ಕ ಶೀರ್ಷಿಕೆ 2217-04-191-2-03-422 – (IHSDP) ಯೋಜನೆ : ರೂ: 510.36 ಲಕ್ಷಗಳು

**ಒಟ್ಟು ರೂ: 1115.14 ಲಕ್ಷಗಳು**

ಕಾಲಾಕಾಲಕ್ಕೆ ಕೇಂದ್ರದಿಂದ ಹೊರಡಿಸುವ ಸೂಚನೆ, ಮಾರ್ಗಸೂಚನೆ, ಕೇಂದ್ರ ಸಿಎಸ್ಎಂಸಿ ಸಭೆಯ ನಡವಳಿಯಲ್ಲಿ ನೀಡಿರುವ ಸೂಚನೆ, ಎಸ್ಎಲ್ಇಸಿ (IHSDP) ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದರ ಜೊತಗೆ ಈ ಕೆಳಕಂಡ ಷರತ್ತುಗಳನ್ನು ಪಾಲಿಸಬೇಕೆಂದು ಸೂಚಿಸಲಾಗಿದೆ.

1. ಈ ಮೊತ್ತವನ್ನು ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
2. ಫಲಾನುಭವಿಗಳಿಂದ ವಂತಿಕೆಯ ನಿಯಮಿತವಾಗಿ ಪಾವತಿಯಾಗುವಂತೆ ಕ್ರಮ ವಹಿಸತಕ್ಕದ್ದು.
3. ಯೋಜನೆಯ ಅನುಷ್ಠಾನದ ಹಂತದ ಬಗ್ಗೆ ಕಾಲಕಾಲಕ್ಕೆ ವರದಿಗಳನ್ನು ರಾಜ್ಯ ಸರ್ಕಾರಕ್ಕೆ ಹಾಗೂ ಕೇಂದ್ರ ಸರ್ಕಾರಕ್ಕೆ ನೀಡತಕ್ಕದ್ದು.
4. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕ ಇಡತಕ್ಕದ್ದು.
5. ನಿಗದಿತ ಅವಧಿಯೊಳಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
6. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.
7. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ:4:ಟಿಎಫ್‌ಪಿ:2012, ಬೆಂಗಳೂರು, ದಿನಾಂಕ:27/04/2012 ರಲ್ಲಿ ತಿಳಿಸಿರುವಂತೆ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ:4:ಟಿಎಫ್‌ಪಿ:2012, ದಿನಾಂಕ:27/04/2012 ರಲ್ಲಿ ಆರ್ಥಿಕ ಇಲಾಖೆಯವರು ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

**ಪಿ.ಆರ್. 1838**

**ನಾಗಣ್ಣ**
ಪೀಠಾಧಿಕಾರಿ–4, ವಸತಿ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ:** ಶ್ರೀಮತಿ ಜಿ.ರತ್ನಮಾಲ, ಮುಖ್ಯ ಲೆಕ್ಕಾಧಿಕಾರಿಗಳು (ಭೂಸ್ವಾಧೀನ), ಮಹಾ ವ್ಯವಸ್ಥಾಪಕರ ಕಚೇರಿ, ಕೃಷ್ಣಾ ಮೇಲ್ದಂಡೆ ಯೋಜನೆ, ಬಾಗಲಕೋಟೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಎಸಗಿರುವ ಅವ್ಯವಹಾರಕ್ಕೆ ಸಂಬಂಧಪಟ್ಟಂತೆ ನಡೆದ ಇಲಾಖಾ ವಿಚಾರಣೆ ರೀತ್ಯ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1) ಮಹಾ ವ್ಯವಸ್ಥಾಪಕರ ಕಚೇರಿ (ಭೂಸ್ವಾಧೀನ), ಕೃಷ್ಣ ಮೇಲ್ದಂಡೆ ಯೋಜನೆ, ನವನಗರ, ಬಾಗಲಕೋಟೆ ಇವರ ಪತ್ರ ಸಂಖ್ಯೆ:ಸಂಮುಂವ್ಯ/ಭೂಸ್ವಾ/ಸಿಬ್ಬಂದಿ/ವಹಿ/72/2005–06 /488 ದಿನಾಂಕ:28.11.2007.

2) ಕಾರಣ ಕೇಳುವ ನೋಟೀಸ್ ನೀಡಿದ ದಿನಾಂಕ:11.1.2008.
3) ಸರ್ಕಾರದ ಆದೇಶ ಸಂಖ್ಯೆ:ಆಇ 358 ರಾಲೆಪ 2007 ದಿನಾಂಕ:29.8.2009.
4) ವಿಚಾರಣಾಧಿಕಾರಿಗಳು ನೀಡಿದ ವರದಿ ದಿನಾಂಕ:12.10.2010.
5) ಆಪಾದಿತ ನೌಕರರಿಗೆ ಎರಡನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ ದಿನಾಂಕ:10.12.2010.
6) ಎರಡನೇ ಕಾರಣ ಕೇಳುವ ನೋಟೀಸಿಗೆ ಆಪಾದಿತ ನೌಕರರು ಲಿಖಿತ ಉತ್ತರ ಸಲ್ಲಿಸಿದ ದಿನಾಂಕ:29.1.2011.
7) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 188 ಸಿಎನ್‌ಎಸ್ 11 ದಿನಾಂಕ:1.3.2012.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಮಹಾ ವ್ಯವಸ್ಥಾಪಕರು, ಭೂಸ್ವಾಧೀನ, ಕೃಷ್ಣಾ ಮೇಲ್ದಂಡೆ ಯೋಜನೆ, ಬಾಗಲಕೋಟೆ ಇವರು ಶ್ರೀಮತಿ ಜಿ.ರತ್ನಮಾಲ, ಉಪ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಕೃಷ್ಣಾ ಮೇಲ್ದಂಡೆ ಯೋಜನೆ, (ಭೂಸ್ವಾಧೀನ) ಬಾಗಲಕೋಟೆ ಇಲ್ಲಿ ದಿನಾಂಕ:1.9.2005 ರಿಂದ 14.8.2007ರವರೆಗೆ ಮುಖ್ಯ ಲೆಕ್ಕಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ, ಮುಖ್ಯವಾಗಿ ನಗದು ಪುಸ್ತಕವನ್ನು ನಿಯಮಿತವಾಗಿ ಬರೆಯದಿರುವುದು, ಕಚೇರಿಯ ಸಾದಿಲ್ವಾರು ವೆಚ್ಚವೆಂದು ರೂ.1,59,341/–ಗಳನ್ನು ಸೆಲ್ಫ್ ಚೆಕ್ ಮುಖಾಂತರ ಪಡೆದಿರುವುದು, ಇವರಿಗೆ ಹಂಚಿಕೆ ಮಾಡಿದ ಸರ್ಕಾರಿ ವಸತಿ ಗೃಹದ ದುರಸ್ತಿಗಾಗಿ ರೂ.72,966/–ಗಳನ್ನು ಡ್ರಾ ಮಾಡಿರುವುದು ನಿಯಮ ಬಾಹಿರವಾಗಿ ಪ್ರಯಾಣ ಭತ್ಯೆ ಬಿಲ್‌ಗಳನ್ನು ಕ್ಲೇಂ ಮಾಡಿರುವುದು ಇತ್ಯಾದಿಯಾಗಿ ಎಸಗಿದ ಕರ್ತವ್ಯ ಲೋಪ ಕುರಿತಂತೆ ಇವರ ಮೇಲೆ ಶಿಸ್ತಿನ ಕ್ರಮ ಕೈಗೊಳ್ಳಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು. ಇದರನ್ವಯ ಪರಿಶೀಲಿಸಿ, ಶ್ರೀಮತಿ ರತ್ನಮಾಲ, ಉಪ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಇರುವ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರ ರೀತ್ಯಾ ಶಿಸ್ತು ಕ್ರಮ ಪ್ರಾರಂಭಿಸಲಾಯಿತು. ಶ್ರೀಮತಿ ಜಿ.ರತ್ನಮಾಲರವರ ವಿರುದ್ಧ ಒಂಬತ್ತು ಆರೋಪಗಳನ್ನು ಮಾಡಲಾಗಿತ್ತು. ಅವುಗಳೆಂದರೆ,

1) ಒಂದು ವರ್ಷದವರೆವಿಗೆ ನಗದು ಪುಸ್ತಕವನ್ನು ಬರೆಯದಿರುವುದು,
2) ನಗದು ಪುಸ್ತಕ ಬರೆಯದೆ ಲೆಕ್ಕಪತ್ರ ಸರಿಯಾಗಿದೆ ಎಂದು ತಿಳಿಸಿ ಗ್ರಾಂಟ್ ಮತ್ತು ಔಟ್‌ಲೇ ವರದಿ ಸಲ್ಲಿಸಿರುವುದು,
3) 13 ತಿಂಗಳು ಬ್ಯಾಂಕ್ ಅಕೌಂಟ್‌ನೊಂದಿಗೆ Re-conciliation ಮಾಡದಿರುವುದು,
4) ಹಿಂದಿನ ನಿಯೋಜನಾ ಕಛೇರಿಯ ರೂ.3,080/– ವೇತನವನ್ನು KBJNL ನಿಂದ ಪಡೆದಿರುವುದು,
5) KBJNLನಿಂದ ಪಡೆಯಲು ಅವಕಾಶವಿಲ್ಲದಿದ್ದರೂ ಸಹ ರೂ.10,850/– ಪ್ರಯಾಣ ಭತ್ಯೆಯನ್ನು ಡ್ರಾ ಮಾಡಿರುವುದು,
6) ಯಾವುದೇ ದಾಖಲೆ ಮತ್ತು ಖರ್ಚಿನ ವಿವರಗಳನ್ನು ಸಲ್ಲಿಸದೆ ರೂ.26,635/–ಗಳನ್ನು ತಮ್ಮ ಪತಿಯ ವೈದ್ಯಕೀಯ ವೆಚ್ಚ ಮರುಪಾವತಿ ಪಡೆದಿರುವುದು,
7) ಸಾದಿಲ್ವಾರು ವೆಚ್ಚವೆಂದು ಡ್ರಾ ಮಾಡಿರುವ ರೂ.84,680/– ನಿಯಮಾನುಸಾರ ವಿರುವುದಿಲ್ಲ,
8) ತಮ್ಮ ವಾಸಕ್ಕಾಗಿ ಹಂಚಿಕೆ ಮಾಡಿದ್ದ ಸರ್ಕಾರಿ ವಸತಿ ಗೃಹದ ದುರಸ್ತಿಗಾಗಿ ಯಾವುದೇ ನಿಯಮಗಳನ್ನು ಪಾಲಿಸದೆ ರೂ.72,966/–ಗಳನ್ನು self-cheque ಮೂಲಕ ಡ್ರಾ ಮಾಡಿರುವುದು.

9) ಸೂಕ್ತ ಮಂಜೂರಾತಿ ಪಡೆಯದೆ ಹಾಗೂ ಅನಗತ್ಯವಾಗಿ ಪ್ರಯಾಣ ಕೈಗೊಂಡು ರೂ.52,967/– ಪ್ರಯಾಣ ಭತ್ಯೆ ಪಡೆದಿರುವುದು.

ಈ ಆರೋಪಗಳ ಬಗ್ಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)ನಿಯಮಾವಳಿ 1957ರ ನಿಯಮ 11(4)ರ ರೀತ್ಯ ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ಆರೋಪಿತ ಅಧಿಕಾರಿಗೆ ನೀಡಲಾಗಿತ್ತು.

ಶ್ರೀಮತಿ ಜಿ.ರತ್ನಮಾಲ ರವರು ಕಾರಣ ಕೇಳುವ ನೋಟೀಸಿಗೆ ನೀಡಿದ ಉತ್ತರದಲ್ಲಿ ಅವರ ಮೇಲಿರುವ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಇಲಾಖಾ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಮೇಲೆ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಫ.ನಿ.ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿ ಆದೇಶ ಹೊರಡಿಸಲಾಯಿತು.

ಮೇಲೆ ಕ್ರಮ ಸಂಖ್ಯೆ(4)ರಲ್ಲಿ ಓದಲಾದ ದಿನಾಂಕ:12.10.2010ರಂದು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ವಿಚಾರಣಾ ವರದಿಯಲ್ಲಿ ಅಪಾದಿತ ಅಧಿಕಾರಿ ಶ್ರೀಮತಿ ಜಿ.ರತ್ನಮಾಲರವರ ವಿರುದ್ಧದ ಎಲ್ಲಾ ಅರೋಪಗಳು ಸಾಬೀತಾಗಿರುವುದೆಂದು ನಿರ್ಣಯಿಸಿರುತ್ತಾರೆ. ಈ ವಿಚಾರಣಾ ವರದಿಯೊಂದಿಗೆ ಮೇಲೆ ಕ್ರಮ ಸಂಖ್ಯೆ(5)ರಲ್ಲಿ ಓದಲಾದ ಎರಡನೇ ಕಾರಣ ಕೇಳುವ ನೋಟೀಸನ್ನು ಆಪಾದಿತ ಅಧಿಕಾರಿ ಶ್ರೀಮತಿ ಜಿ.ರತ್ನಮಾಲ ರವರಿಗೆ ನೀಡಲಾಗಿತ್ತು.

ಇದಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ(6)ರಲ್ಲಿ ಶ್ರೀಮತಿ ರತ್ನಮಾಲರವರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರದಲ್ಲಿ ಪ್ರಮುಖವಾಗಿ ಈ ಕೆಳಕಂಡಂತೆ ಸಲ್ಲಿಸಿರುತ್ತಾರೆ.

I. ತಾವು ಮುಖ್ಯ ಲೆಕ್ಕಾಧಿಕಾರಿಯಾಗಿದ್ದು ನಗದು ಪುಸ್ತಕ ಬರೆಯುವುದಕ್ಕೆ ಗುಮಾಸ್ತರಾಗಿರುವುದಿಲ್ಲ. ತಾವು ಸಾಮಾನ್ಯ ನಗದು ಪುಸ್ತಕವನ್ನು ನಗದು ಗುಮಾಸ್ತರು ಹಾಗೂ ಆಡಿಟ್ ಅಧಿಕಾರಿಗಳ ಮುಖಾಂತರ ಬರೆಸಿದ್ದರೂ ಅದನ್ನು ತಮ್ಮ ಸಹಿಗಾಗಿ ಮಂಡಿಸಿರುವುದಿಲ್ಲ,

II. ಕಾಮಗಾರಿ ನಗದು ಪುಸ್ತಕ ಮತ್ತು ಅದಕ್ಕೆ ಸಂಬಂಧಿಸಿದ ಘೋಶ್ವಾರೆಗಳನ್ನು ಮುಖ್ಯ ಲೆಕ್ಕಾಧಿಕಾರಿಗಳು ಅಂದರೆ ಚೆಕ್ ಬರೆಯುವ ಅಧಿಕಾರಿಗಳೇ ಬರೆಯಬೇಕೆಂಬುದು ಸರಿಯಲ್ಲ. ಇದರಿಂದ ಗುಮಾಸ್ತರನ್ನು ಮತ್ತು ಆಡಿಟ್ ಅಧಿಕಾರಿಗಳನ್ನು ಕೂಡಿಸಿ ಸಂಬಳ ಕೊಡಬೇಕೆಂಬ ಅರ್ಥ ಬರುತ್ತದೆ. ಕಾಮಗಾರಿ ನಗದು ಪುಸ್ತಕವನ್ನು ಬರೆದಿದ್ದರೂ ಆಡಿಟ್ ಅಧಿಕಾರಿಗಳು ದುರುದ್ದೇಶದಿಂದ ಅದಕ್ಕೆ ಸಹಿ ಮಾಡಲು ಅವಕಾಶ ಕೊಡದೆ ಅಸಹಕಾರದಿಂದ ವರ್ತಿಸಿರುತ್ತಾರೆ. ನಗದು ಪುಸ್ತಕವನ್ನು ಮಂಡಿಸದ ಬಗ್ಗೆ ಹಲವಾರು ತಿಳುವಳಿಕೆ ಪತ್ರಗಳನ್ನು ನೀಡಿದ್ದೆ. ಆ ಕಡತವನ್ನು ಉದ್ದೇಶ ಪೂರ್ವಕವಾಗಿ ನಾಪತ್ತೆ ಮಾಡಲಾಗಿರುತ್ತದೆ,

III. ತಾವು ಕಾರ್ಯಭಾರ ವಹಿಸಿಕೊಳ್ಳುವ ಮೊದಲಿನಿಂದಲೂ ಲೆಕ್ಕಹೊಂದಾಣಿಕೆಯನ್ನು ಸರಿಯಾಗಿ ಮಾಡಿರಲಿಲ್ಲ. ತಮ್ಮ ಕಾರ್ಯಾವಧಿಯಲ್ಲಿ ಸಾಕಷ್ಟು ಕಷ್ಟಪಟ್ಟು ಅದನ್ನು ಸರಿಪಡಿಸಲಾಗಿದೆ. ವಿಚಾರಣೆಯಲ್ಲಿ ಯಾವ ಆಧಾರದ ಮೇಲೆ ಲೆಕ್ಕಹೊಂದಾಣಿಕೆ ಮಾಡಲಾಗಿಲ್ಲ ಎಂಬುದನ್ನು ಹೇಳಿರುವುದಿಲ್ಲ. ಮುಖ್ಯ ಲೆಕ್ಕಾಧಿಕಾರಿಯು ಲೆಕ್ಕಹೊಂದಾಣಿಕೆ ಮಾಡಬೇಕು/ಮಾಡಿಸಬೇಕು ಎಂಬುದು ತಪ್ಪು ಗ್ರಹಿಕೆ.

IV. ಮತ್ತು v) ತಮ್ಮನ್ನು ಕಾಡ ಮೈಸೂರಿನಿಂದ KBJNLಗೆ ವರ್ಗಾಯಿಸಲಾಗಿತ್ತು. ಅಂದರೆ ಒಂದು ಅನ್ಯ ಸೇವೆಯಿಂದ ಮತ್ತೊಂದು ಅನ್ಯ ಸೇವೆಗೆ ವರ್ಗಾವಣೆ. ಇತರ ಎಲ್ಲಾ ಅಧಿಕಾರಿಗಳು ಸೇರುವ ಕಾಲದ ಸಂಬಳ ಮತ್ತು ವರ್ಗಾವಣೆ ಪ್ರಯಾಣ ಭತ್ಯೆಯನ್ನು KBJNLನಿಂದ ಪಡೆದಿರುತ್ತಾರೆ. ತಾವು ತಪ್ಪಾಗಿ joining time pay ನೀಡಲು CADA ಮೈಸೂರಿಗೆ ಪತ್ರ ಬರೆದಿದ್ದು, ಇದು ಹಿಂದಿರುಗಿ ಬಂದಿದ್ದರೂ ಸಹ double claim ಮಾಡಲಾಗಿದೆ ಎಂದು ಆರೋಪಿಸಲಾಗಿದೆ.

VI ತಮ್ಮ ಪತಿಯ medical reimbursement claimಗಳಲ್ಲಿ ಅಗತ್ಯವಿರುವ Essential Certificate ಮತ್ತು vouchersಗಳನ್ನು Form-B ಜೊತೆಗೆ ವೈದ್ಯರಿಂದ ಸಹಿ ಮಾಡಿಸಿ claim ಮಾಡಿರುತ್ತೇನೆ. ಶ್ರೀ ಲಮಾಣಿ, ಆಡಿಟ್ ಆಫೀಸರ್‌ರವರು ವಿಷಯ ನಿರ್ವಾಹಕರೊಂದಿಗೆ ಸೇರಿ Medical reimbursement ದಾಖಲೆಗಳನ್ನು ನಾಶ ಮಾಡಿ ನನ್ನ ಮೇಲೆ ಸುಳ್ಳು ಆಪಾದನೆ ಮಾಡಿರುತ್ತಾರೆ. ದಾಖಲೆಗಳಲ್ಲಿ ಅಡಕವಿಲ್ಲವೆಂದಲ್ಲಿ ಲೆಕ್ಕಪರಿಶೋಧನಾಧಿಕಾರಿಯವರು (ಶ್ರೀವಿ.ಆರ್.ಲಮಾಣಿ) ದಾಖಲೆಗಳನ್ನು ಕಿತ್ತುಹಾಕಿ ಆಕ್ಷೇಪಣೆ ಮಾಡಿರಬಹುದಾಗಿರುತ್ತದೆ.

VII ಕೃಷ್ಣ ಮೇಲ್ದಂಡೆ ಯೋಜನೆ ಮುಖ್ಯ ಲೆಕ್ಕಾಧಿಕಾರಿಗೆ Money drawing and disbursing ಅಧಿಕಾರವನ್ನು ನೀಡಲಾಗಿರುತ್ತದೆ. Financial and Accounting Hand Book of River Valley Project in Karnataka State ಇದರಲ್ಲಿನ ವಿಶೇಷವಾದ ನಿಯಮಗಳಂತೆ ಕ್ರಮ ತೆಗೆದುಕೊಂಡಿರುತ್ತೇನೆ. ಲೆಕ್ಕಪರಿಶೋಧನಾಧಿಕಾರಿಗಳು MCE ನಿಯಮಗಳನ್ನು ಅನುಸರಿಸಿ ಆಕ್ಷೇಪಣೆ ಮಾಡಿರುವುದರಿಂದ ದೋಷಾರೋಪಣೆ ನ್ಯೂನತೆಯಿಂದ ಕೂಡಿರುತ್ತದೆ. ತುರ್ತು ಸಂದರ್ಭಗಳಲ್ಲಿ, ಕಛೇರಿ ವೇಳೆ ಮೀರಿದ ಸಂದರ್ಭಗಳಲ್ಲಿ, ರಜಾದಿನಗಳಂದು ಖಾಸಗಿ courier ಸೇವೆ ಪಡೆಯಲಾಗಿದೆ. ಇವರ ಕಛೇರಿಯಲ್ಲಿ Xerox ಯಂತ್ರ ಇಲ್ಲದಿದ್ದರೂ R&R ಕಛೇರಿಯಲ್ಲಿ Xerox ಮಾಡಿಸುತ್ತಿದ್ದುದರಿಂದ, ಅದರ ಸಲುವಾಗಿ Xerox paper ಮತ್ತು ink tonerಗಳನ್ನು ಇವರ ಕಛೇರಿಯಿಂದ ಖರೀದಿಸಲಾಗಿದೆ. ಕೆಲವು ತುರ್ತು ಸಂದರ್ಭಗಳಲ್ಲಿ ಹಾಗೂ ಬೆಂಗಳೂರಿಗೆ ಸಭೆಯಲ್ಲಿ ಭಾಗವಹಿಸಲು ಬಂದಾಗ ಖಾಸಗಿಯವರಿಂದ Xerox ಮಾಡಿಸಲಾಗಿರುತ್ತದೆ. ಇದಕ್ಕೂ ಸಹ ಆಕ್ಷೇಪಣೆ ವ್ಯಕ್ತಪಡಿಸಲಾಗಿದೆ. ಇತರೆ ಸಣ್ಣ ಪುಟ್ಟ ಖರೀದಿಗಳು, ಫರ್ನೀಚರ್ ರಿಪೇರಿ ಇತ್ಯಾದಿಗಳೂ

ಸಹ ನಿಯಮ ಬದ್ಧವಾಗಿ ಮಾಡಿದವುಗಳಾಗಿವೆ. ಅವಶ್ಯಕತೆ ಇಲ್ಲದೆ ಸಾಮಗ್ರಿಗಳನ್ನು ಖರೀದಿಸಿರುವುದಿಲ್ಲ. ಯಾವುದೇ ವೆಚ್ಚವನ್ನು ವೈಯಕ್ತಿಕ ಲಾಭ ದೃಷ್ಟಿಯಿಂದ ಮಾಡಿರುವುದಿಲ್ಲ.

VIII ಹಣವನ್ನು ಕಟ್ಟಡದ ದುರಸ್ತಿಗಾಗಿ ಬಳಸಲಾಗಿದೆಯೇ ಹೊರತು ಸ್ವಂತಕ್ಕೆ ಬಳಸಿಕೊಂಡಿರುವುದಿಲ್ಲ. ತಮಗೆ ಹಂಚಿಕೆಯಾಗಿದ್ದ ವಸತಿ ಗೃಹದ ರಿಪೇರಿಯನ್ನು ತಮ್ಮ ಸ್ವಂತ ಖರ್ಚಿನಲ್ಲಿ ಸಾಮಗ್ರಿಗಳನ್ನು ಖರೀದಿಸಿ ರಿಪೇರಿ ಮಾಡಿಸಿಕೊಂಡಿರುತ್ತೇನೆ. ಇದಕ್ಕೆ ಯಾವುದೇ ನಿಯಮಗಳಿರುವುದಿಲ್ಲ. Reimbursement ಮಾಡಿಕೊಳ್ಳುವ ಉದ್ದೇಶ ಇರಲಿಲ್ಲವಾದ್ದರಿಂದ ಯಾವುದೇ ನಿಯಮವನ್ನು ಪಾಲಿಸಿರುವುದಿಲ್ಲ. ಆಯುಕ್ತರು ಮಾಡಿರುವ ಖರ್ಚನ್ನು reimbursement ಮಾಡಿಕೊಳ್ಳುವಂತೆ ತಿಳಿಸಿದ್ದರಿಂದ reimbursement ಮಾಡಿಕೊಂಡಿರುತ್ತೇನೆ. ಈ ವೆಚ್ಚವನ್ನು (ರೂ.72,960/–) BTDA ಯಿಂದ ವಸೂಲು ಮಾಡಲು ಪ್ರಯತ್ನಿಸಬಹುದು ಅಥವಾ ಅವರಿಗೆ ಕೊಡಬೇಕಾದ ಬಾಡಿಗೆಯಿಂದ ಕಟಾವು ಮಾಡಿಕೊಳ್ಳಬಹುದು,

IX ಮೀಟಿಂಗ್‌ಗಳಲ್ಲಿ ಭಾಗವಹಿಸಲು ಹೋದಾಗ, ಹಿರಿಯ ಅಧಿಕಾರಿಗಳ ಜೊತೆ ಮುಖ್ಯ ವಿಷಯಗಳನ್ನು/ಪ್ರಗತಿ ವರದಿ/ಬಜೆಟ್‌ಗಳ ಬಗ್ಗೆ ಚರ್ಚಿಸಲು ಪ್ರಯಾಣಿಸುವಾಗ ಇತರೆ ಸಣ್ಣ ಕೆಲಸಗಳನ್ನು ಜೊತೆ ಮಾಡಿಕೊಂಡು ಕರ್ತವ್ಯದ ಮೇಲೆ ಪ್ರಯಾಣಿಸಿದ್ದೇನೆಯೆ ಹೊರತು ಸಣ್ಣ ಕೆಲಸಗಳಿಗಾಗಿಯೇ ಪ್ರಯಾಣ ಕೈಗೊಂಡಿರುವುದಿಲ್ಲ. ಬೆಂಗಳೂರಿನಲ್ಲಿ ಕುಟುಂಬವಿದ್ದು ದೂರದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಎಲ್ಲಾ ಅಧಿಕಾರಿ/ನೌಕರರು ಸರ್ಕಾರಿ ರಜಾ ದಿನಗಳನ್ನೂ ಕರ್ತವ್ಯ ನಿಮಿತ್ತವಾಗಿ ಬೆಂಗಳೂರಿಗೆ ಬರುವ ದಿನಗಳಿಗೆ ಹೊಂದಿಸಿಕೊಂಡು ಬರುವುದು ಸಾಮಾನ್ಯವಾಗಿದೆ. ನನ್ನೊಬ್ಬಳನ್ನೇ ಏಕೆ target ಮಾಡಿದೆ ಎನ್ನುವುದು ಅರ್ಥವಾಗುವುದಿಲ್ಲ.

X ಈ ಎಲ್ಲಾ ಆಪಾದನೆಗಳು ದುರುದ್ದೇಶದಿಂದ ಕೂಡಿದ್ದು, ಇದಕ್ಕೆ ಲೆಕ್ಕಪರಿಶೋಧನಾಧಿಕಾರಿ ಶ್ರೀ ಆರ್.ವಿ.ಲಮಾಣಿರವರು ಕಾರಣರೆಂದು ಹಾಗೂ ವಿಚಾರಣಾಧಿಕಾರಿಗಳು ಯಾವುದೇ ದಾಖಲೆಗಳು, ವಾಸ್ತವಾಂಶಗಳನ್ನು ಪರಿಗಣಿಸದೇ ಮಂಡನಾಧಿಕಾರಿಗಳ ಹೇಳಿಕೆಗಳ ಮೇಲೆ ನಿರ್ಣಯ ಮಾಡಿರುತ್ತಾರೆ. ಜಾತಿ ಮತ್ತು ಲಿಂಗ ಬೇಧದ ಆಧಾರದ ಮೇಲೆ ತಮ್ಮ ವಿರುದ್ಧ ತಾರತಮ್ಯ ಮಾಡಲಾಗಿದೆ ಎಂದು ತಿಳಿಸಿದ್ದಾರೆ.

ಶ್ರೀಮತಿ ಜಿ.ರತ್ನಮಾಲ, ಉಪ ನಿಯಂತ್ರಕರು ನೀಡಿರುವ ಉತ್ತರವನ್ನು ವಿಚಾರಣಾ ವರದಿಯೊಂದಿಗೆ ಪರಿಶೀಲಿಸಲಾಗಿ, ಇದೇ ವಾದವನ್ನು ಇವರು ವಿಚಾರಣಾಧಿಕಾರಿಯವರ ಮುಂದೆಯೂ ಮಂಡಿಸಿರುತ್ತಾರೆ. ಇವುಗಳನ್ನು ಪರಿಗಣಿಸಿದ ವಿಚಾರಣಾಧಿಕಾರಿಗಳು, ಇವರು ಕೃಷ್ಣ ಮೇಲ್ದಂಡೆ ಯೋಜನೆ ಭೂಸ್ವಾಧೀನದಂತಹ ಬೃಹತ್ ಯೋಜನೆಯ ಹಣಕಾಸಿನ ವ್ಯವಹಾರದ ಜವಾಬ್ದಾರಿ ಹೊಂದಿದ್ದು, ನಗದು ಪುಸ್ತಕವನ್ನು ಪರಿಶೀಲಿಸಿದಾಗ ಪ್ರತಿ ದಿನ ನಗದು ಪುಸ್ತಕವನ್ನು ಬರೆಯದೆ ಅಥವಾ ಬರೆಯುವುದನ್ನು ಖಾತ್ರಿ ಪಡಿಸದೆ ತಮಗೆ ಅನುಕೂಲವಾಗುವ ಹಾಗೆ 3 ತಿಂಗಳು ಮತ್ತು 6 ತಿಂಗಳಿಗೊಮ್ಮೆ ಬರೆದು ಸಹಿ ಮಾಡುವ ಪರಿಪಾಟ ಕ್ರಮಬದ್ಧವಲ್ಲ ಹಾಗೂ ಇದು ಕೆ.ಎಫ್.ಸಿ.ಯ ಅನುಚ್ಛೇಧ 327ರ ಉಲ್ಲಂಘನೆಯಾಗುತ್ತದೆ ಎಂದು ತಿಳಿಸಿರುತ್ತಾರೆ. ಅದೇ ರೀತಿಯಲ್ಲಿ ಪ್ರತಿ ತಿಂಗಳು ಲೆಕ್ಕಹೊಂದಾಣಿಕೆ ಮಾಡುವುದರಿಂದ ಮಾತ್ರ ಕಛೇರಿಯ ಆಗುಹೋಗುಗಳ ಬಗ್ಗೆ ಲೆಕ್ಕ ಸಿಗುತ್ತದೆ ಮತ್ತು ಕಛೇರಿಯ ಚೆಕ್ಕುಗಳ ಹೊರತಾಗಿ ಬೇರೆ ಯಾವುದೇ ಚೆಕ್‌ಗಳು ನಗಧೀಕರಣವಾಗಿಲ್ಲವೆಂದು ಖಚಿತ ಪಡಿಸಿಕೊಳ್ಳಲು ಸಾಧ್ಯವಿದೆ. ಆದರೆ ಇವರು ಪ್ರತಿ ತಿಂಗಳು ಲೆಕ್ಕ ಹೊಂದಾಣಿಕೆ ಮಾಡಲು ಯಾವುದೇ ಕ್ರಮವಹಿಸದಿರುವುದು ರುಜುವಾತಾಗಿದೆ.

ಕೃಷ್ಣ ಮೇಲ್ದಂಡೆ ಯೋಜನೆಯಲ್ಲಿ ಹಾಜರಾದಾಗ ಸೇರುವ ಕಾಲದ ವೇತನ ಭತ್ಯೆ ಹಾಗೂ ಪ್ರಯಾಣ ಭತ್ಯೆಯನ್ನು ಹಿಂದಿನ ಕಛೇರಿಯಿಂದ ಪಡೆದಿಲ್ಲವೆಂದು ಪ್ರಮಾಣ ಪತ್ರ ನೀಡದೇ ಇವುಗಳನ್ನು ಪಡೆದಿದ್ದಾರೆ. ಅಲ್ಲದೆ, ವರ್ಗಾವಣೆ ಪ್ರಯಾಣ ಭತ್ಯೆಯ ಬಿಲ್ಲನ್ನು ಹಿಂದಿನ ಕಛೇರಿಯಾದ CADA ಮೈಸೂರಿಗೆ ಕಳುಹಿಸಿದ್ದು, ಅದು ಏನಾಯಿತು ಎಂದು ಖಚಿತ ಪಡಿಸಿಕೊಳ್ಳದೆ ಈಗಿನ ಕಛೇರಿಯಿಂದ ಪಡೆದಿದ್ದಾರೆ. ನಿಯಮಕ್ಕೆ ವಿರುದ್ಧವಾಗಿ ಇವರು ಈ ವೇತನ ಭತ್ಯೆಗಳನ್ನು ಪಡೆದಿರುವುದು ರುಜುವಾತಾಗಿದೆ. ಈ ಆಪಾದನೆಗಳಲ್ಲಿ ಒಳಗೊಂಡಿರುವ ಹಣ ಒಟ್ಟು ರೂ.13,630/–. ಯಾವುದೇ ಅವಶ್ಯಕ ದಾಖಲೆಗಳನ್ನು, ನಮೂನೆಗಳನ್ನು ಮತ್ತು ನಿಯಮಾನುಸಾರ ಅವಶ್ಯವಿರುವ ದಾಖಲೆಗಳನ್ನು ಹಾಜರುಪಡಿಸದೆ ತಮ್ಮ ಮನಸ್ಸಿಗೆ ಬಂದಂತೆ, ಅಧಿಕಾರ ವ್ಯಾಪ್ತಿಯನ್ನು ಮೀರಿ ತಮ್ಮ ಪತಿಯ ವೈದ್ಯಕೀಯ ವೆಚ್ಚವಾದ ರೂ.26,635/–ನ್ನು ಸೆಲ್ಫ್ ಚೆಕ್ ಮೂಲಕ ಪಡೆದು ಕೊಂಡಿರುತ್ತಾರೆ. ಸಾದಿಲ್ವಾರು ವೆಚ್ಚವೆಂದು ರೂ.1,59,341/–ಗಳನ್ನು ಸೆಲ್ಫ್ ಚೆಕ್ ಮೂಲಕ ಡ್ರಾ ಮಾಡಿದ್ದು ಇದರಲ್ಲಿ ರೂ.84,680/–ನ್ನು ನಿಯಮ ಬಾಹಿರವಾಗಿ ಡ್ರಾ ಮಾಡಲಾಗಿದೆ. ಅಂದರೆ ಸಾದಿಲ್ವಾರು ಕೈಪಿಡಿಯ ನಿಯಮಗಳನ್ನು ಪಾಲಿಸದೆ, ಅಧಿಕಾರ ಪ್ರತ್ಯಾಯೋಜನೆಯನ್ನು ಮೀರಿ, ಮತ್ತು ಸಾಮಗ್ರಿ ಪೂರೈಕೆದಾರರ ಹೆಸರಿಗೆ ಚೆಕ್ ತರಿಸದೆ ತಾವೇ ಡ್ರಾ ಮಾಡಿರುವುದು. ಇದಲ್ಲದೆ, ತಮಗೆ ಹಂಚಿಕೆಯಾಗಿದ್ದ ವಸತಿ ಗೃಹ BTDA(Bagalkot Town Development Authority)ಅವರ ದಾಗಿದ್ದು, ಇದರ ದುರಸ್ತಿ ಇತ್ಯಾದಿಗಳನ್ನು BTDA ಮುಖಾಂತರ ಮಾಡಿಸಬೇಕಿದ್ದರೂ, ತಾವೇ ಸ್ವತ: ಯಾವುದೇ ನಿಯಮಗಳನ್ನು ಪಾಲಿಸದೆ ಸಾಮಗ್ರಿಗಳನ್ನು ಖರೀದಿಸಿ ದುರಸ್ತಿ ಮಾಡಿಸಿ, ನಂತರ ವೆಚ್ಚವನ್ನು (ರೂ.72,965/–) reimburse ಮಾಡಿಕೊಂಡಿರುತ್ತಾರೆ. ಅಲ್ಲದೆ, ನಿಯಂತ್ರಣಾಧಿಕಾರಿಗಳ ಪೂರ್ವಾನುಮತಿ ಇಲ್ಲದೆ ಪ್ರವಾಸ ಕೈಗೊಂಡಿದ್ದು, ತಮ್ಮ ಅಧಿಕಾರಾವಧಿಯಲ್ಲಿ 17 ಬಿಲ್ಲುಗಳ ಮೂಲಕ ಒಟ್ಟು ರೂ.52,967 ಪ್ರಯಾಣ ಭತ್ಯೆ ಪಡೆದು ಕೊಂಡಿರುತ್ತಾರೆ.

ಶ್ರೀಮತಿ ಜಿ.ರತ್ನಮಾಲರವರು ರಾಜ್ಯ ಲೆಕ್ಕಪತ್ರ ಇಲಾಖೆಯ ಒಬ್ಬ ಹಿರಿಯ ಅಧಿಕಾರಿಯಾಗಿದ್ದು, ಕೃಷ್ಣ ಮೇಲ್ದಂಡೆ ಯೋಜನೆಯ ಭೂಸ್ವಾಧೀನ ಕಛೇರಿಯ ಮುಖ್ಯ ಲೆಕ್ಕಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಮುಖ್ಯ ಲೆಕ್ಕಾಧಿಕಾರಿಯಾಗಿ ಕಛೇರಿಯಲ್ಲಿನ ಲೆಕ್ಕಪತ್ರಗಳನ್ನು ಯಾವುದೇ ಲೋಪವಾಗದಂತೆ ನಿಯಮಾನುಸಾರ ಸಿದ್ಧಪಡಿಸುವುದು, ಸರ್ಕಾರದ ಹಣಕಾಸಿನ ರಕ್ಷಣೆ, ವೆಚ್ಚದಲ್ಲಿ ಮಿತವ್ಯಯ ಇತ್ಯಾದಿಗಳು ಇವರ ಜವಾಬ್ದಾರಿಯಾಗಿರುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಈ ಕಛೇರಿಯ ಹಣಕಾಸಿನ ವ್ಯವಹಾರಗಳು ಖಜಾನೆ ಮೂಲಕ ಜರುಗದೆ ಬ್ಯಾಂಕ್ ಮೂಲಕ ನಡೆಯುತ್ತಿದ್ದುದರಿಂದ, ಹಣಕಾಸಿನ ವ್ಯವಹಾರದಲ್ಲಿ ಶಿಸ್ತು ಕಾಪಾಡುವುದು ಇವರ ಆದ್ಯ ಕರ್ತವ್ಯವಾಗಿತ್ತು. ಆದರೆ, ಇದನ್ನು ದುರುಪಯೋಗಪಡಿಸಿಕೊಂಡು, ತಮ್ಮ ಇಷ್ಟಾನುಸಾರ ಚೆಕ್‌ಗಳನ್ನು ಬರೆದುಕೊಂಡು ಹಣ ಡ್ರಾ ಮಾಡಿಕೊಂಡಿರುತ್ತಾರೆ. ಅಲ್ಲದೆ ಈ ಎಲ್ಲಾ

ಅವ್ಯವಹಾರಗಳ ಹಾಗೂ ಲೋಪದೋಷಗಳ ತಪ್ಪನ್ನು ಲೆಕ್ಕಪರಿಶೋಧನಾಧಿಕಾರಿಗೆ ವರ್ಗಾಯಿಸಲು ಪ್ರಯತ್ನಿಸಿರುತ್ತಾರೆ. ಕೆಲವು ಸಂದರ್ಭಗಳಲ್ಲಿ ನಿಯಮಗಳನ್ನು ಪಾಲಿಸಿಲ್ಲವೆಂದು ತಾವೇ ತಿಳಿಸಿರುತ್ತಾರೆ.

ಶ್ರೀಮತಿ ಜಿ.ರತ್ನಮಾಲ, ಉಪ ನಿಯಂತ್ರಕರ ವಿರುದ್ಧ ಸಾಬೀತಾಗಿರುವ ಆಪಾದನೆಗಳ ತೀವ್ರತೆಯನ್ನು ಗಮನದಲ್ಲಿಟ್ಟುಕೊಂಡು ಇವರಿಗೆ ಕಡ್ಡಾಯ ನಿವೃತ್ತಿ ದಂಡನೆ ವಿಧಿಸಲು ಪ್ರಸ್ತಾಪಿಸಿ ಕರ್ನಾಟಕ ಲೋಕಾ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕಸೇವಾ ಆಯೋಗವು ಇವರಿಗೆ ಕಡ್ಡಾಯ ನಿವೃತ್ತಿ ದಂಡನೆ ವಿಧಿಸಲು ಮೇಲೆ ಕ್ರಮ ಸಂಖ್ಯೆ(7) ರಲ್ಲಿ ಓದಲಾದ ಪತ್ರದಲ್ಲಿ ಸಹಮತಿ ಸೂಚಿಸಿದೆ.

ಈ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 358 ರಾಲೆಪ 2007 ಬೆಂಗಳೂರು, ದಿನಾಂಕ:29.06.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀಮತಿ ಜಿ.ರತ್ನಮಾಲ, ಉಪ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಮುಖ್ಯ ಲೆಕ್ಕಾಧಿಕಾರಿಯಾಗಿ ಕೃಷ್ಣಾ ಮೇಲ್ದಂಡ ಯೋಜನೆ (ಭೂಸ್ವಾಧೀನ), ಬಾಗಲಕೋಟೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಎಸಗಿದ ಕರ್ತವ್ಯ ಲೋಪ ಕುರಿತಂತೆ ಇಲಾಖಾ ವಿಚಾರಣೆಯಲ್ಲಿ ಈ ಆರೋಪಗಳು ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(vi)ರನ್ವಯ ಇವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಕಡ್ಡಾಯ ನಿವೃತ್ತಿ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**ಪಿ.ಆರ್. 1875**

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ವಿದ್ಯಾರ್ಥಿಗಳ ಸಂಖ್ಯಾಬಲ ಕೊರತೆಯಿರುವ ಮೆಟ್ರಿಕ್ ಪೂರ್ವ/ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯ ಮತ್ತು ಆಶ್ರಮ ಶಾಲೆಗಳನ್ನು ಮೆಟ್ರಿಕ್ ನಂತರದ /ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯ ಹಾಗೂ ಆಶ್ರಮ ಶಾಲೆಗಳನ್ನಾಗಿ ಪರಿವರ್ತಿಸಿ ಅಗತ್ಯ ಇರುವ ಕಡೆಗೆ ಸ್ಥಳಾಂತರಿಸುವ (ವರ್ಗಾಯಿಸುವ) ಬಗ್ಗೆ

**ಓದಲಾಗಿದೆ:** ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ಇವರ ಏಕ ಕಡತ ಸಂಪವಕನಿ/ಇಡಿ–2/ಸಿಆರ್–08/2012–13, ದಿನಾಂಕ:04–06–2012 ಹಾಗೂ 21–06–2012

**ಪ್ರಸ್ತಾವನೆ:**

2011–12ನೇ ಸಾಲಿನಲ್ಲಿ ಸಂಖ್ಯಾಬಲದ ಕೊರತೆ ಇರುವ 5 ಮೆಟ್ರಿಕ್ ಪೂರ್ವ, 1 ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯ ಹಾಗೂ 5 ಆಶ್ರಮಶಾಲೆಗಳನ್ನು, ಸಮೀಪದಲ್ಲೇ ಶಾಲೆ ಮತ್ತು ವಿದ್ಯಾರ್ಥಿನಿಲಯ ಇರುವ ಕಡೆ ಪರ್ಯಾಯ ವ್ಯವಸ್ಥೆ ಮಾಡಿ ಸದರಿ ಆಶ್ರಮ ಶಾಲೆ/ಮೆಟ್ರಿಕ್ ನಂತರದ ಹಾಗೂ ಮೆಟ್ರಿಕ್ ಪೂರ್ವ (ಬಾಲಕ/ಬಾಲಕಿಯರ) ವಿದ್ಯಾರ್ಥಿ ನಿಲಯಗಳನ್ನಾಗಿ ಪರಿವರ್ತಿಸಿ ಅಗತ್ಯ ಇರುವ ಬೇರೆ ಸ್ಥಳಗಳಿಗೆ ಸ್ಥಳಾಂತರಿಸುವ ಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ಇವರು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಸಕಇ 128 ಪವಯೋ 2012, ದಿನಾಂಕ 30–06–2012**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಸಂಖ್ಯಾಬಲ ಕೊರತೆ ಇರುವ ಬಾಲಕ/ಬಾಲಕಿಯರ ವಿದ್ಯಾರ್ಥಿನಿಲಯ ಹಾಗೂ ಆಶ್ರಮ ಶಾಲೆಗಳನ್ನು ಸಮೀಪದಲ್ಲಿ ಶಾಲೆ ಮತ್ತು ವಿದ್ಯಾರ್ಥಿನಿಲಯ ಇರುವ ಕಡೆ ಪರ್ಯಾಯ ವ್ಯವಸ್ಥೆ ಮಾಡಲು ಮೆಟ್ರಿಕ್ ಪೂರ್ವ/ಮೆಟ್ರಿಕ್ ನಂತರದ ಹಾಗು ಆಶ್ರಮಶಾಲೆಗಳನ್ನು ಅನುಬಂಧದಲ್ಲಿ ತಿಳಿಸಿರುವಂತೆ, 1 ಆಶ್ರಮ ಶಾಲೆ ಹಾಗೂ 3 ಮೆಟ್ರಿಕ್ ನಂತರದ (ಬಾಲಕ/ಬಾಲಕಿಯರ) ವಿದ್ಯಾರ್ಥಿನಿಲಯಗಳನ್ನಾಗಿ ಹಾಗೂ 7 ಮೆಟ್ರಿಕ್ ಪೂರ್ವ (ಬಾಲಕ/ಬಾಲಕಿಯರ) ವಿದ್ಯಾರ್ಥಿನಿಲಯಗಳನ್ನಾಗಿ ಪರಿವರ್ತಿಸಿ ಮಂಜೂರಾದ ಸಿಬ್ಬಂದಿ ಸಮೇತ ಹಾಗೂ ನಿಲಯದಲ್ಲಿನ ಜಡ ಸರಕಿನೊಂದಿಗೆ (stock) ಸ್ಥಳಾಂತರಿಸಲು ಮಂಜೂರಾತಿ ನೀಡಿ ಆದೇಶಿಸಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ಜಿಲ್ಲಾವಲಯ ಯೋಜನೆ/ಯೋಜನೇತರ ಲೆಕ್ಕ ಶೀರ್ಷಿಕೆ 2225–00–102–0–33 ರಡಿಯಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಲೋಕನಾಥರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ–2
ಸಮಾಜ ಕಲ್ಯಾಣ ಇಲಾಖೆ

## ಅನುಬಂಧ–1

### ಆಶ್ರಮ ಶಾಲೆ/ಮೆಟ್ರಿಕ್ ನಂತರದ/ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳನ್ನಾಗಿ ಪರಿವರ್ತಿಸಿ ಬೇರೆ ಸ್ಥಳಗಳಿಗೆ ಸ್ಥಳಾಂತರಿಸಿರುವ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಆಶ್ರಮ ಶಾಲೆ/ಮೆಟ್ರಿಕ್ ಪೂರ್ವ/ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ವಿವರ

| ಕ್ರ ಸಂ. | ಜಿಲ್ಲೆಯ ಹೆಸರು | ಕ್ರ ಸಂ. | ಹಾಲಿ ಇರುವ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯ / ಆಶ್ರಮ ಶಾಲೆಯ ಹೆಸರು ಮತ್ತು ಸ್ಥಳ | ಪರಿವರ್ತಿಸಿ ವರ್ಗಾಯಿಸಿರುವ ವಿದ್ಯಾರ್ಥಿನಿಲಯ/ಆಶ್ರಮ ಶಾಲೆಗಳ ಸ್ಥಳದ ವಿವರ | ಜಿಲ್ಲೆ | ಮಂಜೂರಾತಿ ಸಂಖ್ಯೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಬೆಂಗಳೂರು (ಗ್ರಾ) | 1 | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯ, ದೇವನಹಳ್ಳಿ ಟೌನ್, ದೇವನಹಳ್ಳಿ ತಾಲ್ಲೂಕು | ದೇವನಹಳ್ಳಿ ತಾಲ್ಲೂಕು, ಯಲಿಯೂರು ಗ್ರಾಮಕ್ಕೆ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ವರ್ಗಾಯಿಸಲಾಗಿದೆ. | ಬೆಂಗಳೂರು ಗ್ರಾ | 50 |
| 2 | ಉತ್ತರ ಕನ್ನಡ | 2 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಬೆಳಕೆ, ಭಟ್ಕಳ ತಾಲ್ಲೂಕು | ಹಳಿಯಾಳ ತಾಲ್ಲೂಕು, ಸಾಂಬ್ರಾಣಿ ಗ್ರಾಮಕ್ಕೆ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ವರ್ಗಾಯಿಸಲಾಗಿದೆ. | ಉತ್ತರ ಕನ್ನಡ | 50 |
| 3 | ಮೈಸೂರು | 3 | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ, ಬಿ.ಮಟಕೆರೆ, ಹೆಚ್.ಡಿ.ಕೋಟೆ ತಾಲ್ಲೂಕು | ಹುಣಸೂರು ತಾಲ್ಲೂಕು, ನಾಗಾಪುರ ಗ್ರಾಮಕ್ಕೆ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯವನ್ನಾಗಿ ಪರಿವರ್ತಿಸಿ ವರ್ಗಾಯಿಸಲಾಗಿದೆ. | ಮೈಸೂರು | 50 |
| 4 | ಚಾಮರಾಜ ನಗರ | 4 | ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿನಿಲಯ, ಕೊಳ್ಳೇಗಾಲ ಟೌನ್, ಕೊಳ್ಳೇಗಾಲ ತಾಲ್ಲೂಕು | ದಾವಣಗೆರೆ ತಾಲ್ಲೂಕು, ದಾವಣಗೆರೆ ಟೌನ್‌ಗೆ ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯವನ್ನಾಗಿ ಪರಿವರ್ತಿಸಿ ವರ್ಗಾಯಿಸಲಾಗಿದೆ. | ದಾವಣಗೆರೆ | 50 |
| 5 | ಉಡುಪಿ | 5 | ಆಶ್ರಮ ಶಾಲೆ ಆರ್ಡಿ, ಕುಂದಾಪುರ ತಾಲ್ಲೂಕು, | ಹುಣಸೂರು ತಾಲ್ಲೂಕು, ಶೆಟ್ಟಿಹಳ್ಳಿ–ಲಕ್ಕಪಟ್ಟಣದ ಪುನರ್ವಸತಿ ಕೇಂದ್ರಕ್ಕೆ ಆಶ್ರಮ ಶಾಲೆಯನ್ನಾಗಿ ವರ್ಗಾಯಿಸಲಾಗಿದೆ. | ಮೈಸೂರು | 50 |
| | ಉಡುಪಿ | 6 | ಆಶ್ರಮ ಶಾಲೆ ಕಾರ್ಕಳ, ಕಾರ್ಕಳ ತಾಲ್ಲೂಕು | ಕಾರ್ಕಳ ತಾಲ್ಲೂಕು, ಕಾರ್ಕಳ ಟೌನ್‌ಗೆ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ವರ್ಗಾಯಿಸಲಾಗಿದೆ. | ಉಡುಪಿ | 50 |
| 6 | ಬೆಳಗಾಂ | 7 | ಆಶ್ರಮ ಶಾಲೆ, ಸದಲಗಾ, ಚಿಕ್ಕೋಡಿ ತಾಲ್ಲೂಕು | ಗೋಕಾಕ್ ತಾಲ್ಲೂಕು, ಮೇಲ್ಮನಟ್ಟಿ ಗ್ರಾಮಕ್ಕೆ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ವರ್ಗಾಯಿಸಲಾಗಿದೆ. | ಬೆಳಗಾಂ | 50 |

| ಕ್ರ. ಸಂ. | ಜಿಲ್ಲೆಯ ಹೆಸರು | ಕ್ರ ಸಂ. | ಹಾಲಿ ಇರುವ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯ / ಆಶ್ರಮ ಶಾಲೆಯ ಹೆಸರು ಮತ್ತು ಸ್ಥಳ | ಪರಿವರ್ತಿಸಿ ವರ್ಗಾಯಿಸಿರುವ ವಿದ್ಯಾರ್ಥಿನಿಲಯ/ಆಶ್ರಮ ಶಾಲೆಗಳ ಸ್ಥಳದ ವಿವರ | ಜಿಲ್ಲೆ | ಮಂಜೂ ರಾತಿ ಸಂಖ್ಯೆ |
|---|---|---|---|---|---|---|
| **1** | **2** | **3** | **4** | **5** | 6 | **7** |
| 7 | ಹಾಸನ | 8 | ಆಶ್ರಮ ಶಾಲೆ, ಅಂಗಡಿಹಳ್ಳಿ, ಬೇಲೂರು ತಾಲ್ಲೂಕು | ಗುಬ್ಬಿ ತಾಲ್ಲೂಕು, ಹೊನ್ನಶೆಟ್ಟಿಹಳ್ಳಿ ಗ್ರಾಮಕ್ಕೆ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ವರ್ಗಾಯಿಸಲಾಗಿದೆ. | ತುಮಕೂರು | 50 |
| 8 | ಶಿವಮೊಗ್ಗ | 9 | ಆಶ್ರಮ ಶಾಲೆ, ಸೊರಬ, ಸೊರಬ ತಾಲ್ಲೂಕು | ಕೊಪ್ಪ ತಾಲ್ಲೂಕು, ಕೊಪ್ಪ ಟೌನ್‌ಗೆ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ವರ್ಗಾಯಿಸಲಾಗಿದೆ. | ಚಿಕ್ಕಮಂಗಳೂರು | 50 |
| 9 | ಚಿತ್ರದುರ್ಗ | 10 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಹಂಪನೂರು, ಚಿತ್ರದುರ್ಗ ತಾಲ್ಲೂಕು | ಹೊಳಲ್ಕರೆ ತಾಲ್ಲೂಕು, ಹೊಳಲ್ಕೆರೆ ಟೌನ್‌ಗೆ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ವರ್ಗಾಯಿಸಲಾಗಿದೆ. | ಚಿತ್ರದುರ್ಗ | 50 |
| 10 | ಬಳ್ಳಾರಿ | 11 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಕುರೆಕುಪ್ಪ, ಸಂಡೂರು ತಾಲ್ಲೂಕು | ಕೂಡ್ಲಿಗಿ ತಾಲ್ಲೂಕು, ಕೂಡ್ಲಿಗೆ ಟೌನ್‌ಗೆ ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿನಿಲಯವನ್ನಾಗಿ ಪರಿವರ್ತಿಸಿ ವರ್ಗಾಯಿಸಲಾಗಿದೆ | ಬಳ್ಳಾರಿ | 50 |
| **ಒಟ್ಟು** | | | | | | **550** |

**ಎಸ್.ಲೋಕನಾಥರಾವ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು–2
ಸಮಾಜ ಕಲ್ಯಾಣ ಇಲಾಖೆ.

**ಪಿ.ಆರ್. 1868**

## ಕಂದಾಯ ಸಚಿವಾಲಯ

**ವಿಷಯ:–** ಪುತ್ತೂರಿನ ವಿವೇಕಾನಂದ ವಿದ್ಯಾವರ್ಧಕ ಸಂಘ ಇವರಿಗೆ ಸರ್ಕಾರದ ಭೂಮಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:–** ಪತ್ರ ಸಂಖ್ಯೆ: ಎಲ್ಎನ್‌ಡಿ(1ಬಿ)ಪಿಡಿಆರ್: 253/2011–12 ದಿ: 19/20–04–2012

**ಪ್ರಸ್ತಾವನೆ:–**

ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ನಡವಳಿ ಸಂಖ್ಯೆ ಆರ್‌ಡಿಎಸ್/26350/65 ದಿನಾಂಕ 05–03–1969ರನ್ವಯ ಪುತ್ತೂರು ತಾಲ್ಲೂಕಿನ ಪಡ್ನೂರು ಹಾಗೂ ಕಬಕ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 40–78 ಎಕರೆ ವಿಸ್ತೀರ್ಣದ ಸರ್ಕಾರಿ ಭೂಮಿಯನ್ನು ದಿನಾಂಕ 05–03–1969ರಿಂದ ಅನ್ವಯಿಸುವಂತೆ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ನೀಡಲಾಗಿದ್ದು, ಸಂಬಂಧಪಟ್ಟ ವಿವರ ಈ ಕೆಳಗಿನಂತಿದೆ:–

| ಗ್ರಾಮ | ಸ.ನಂ. | ವಿಸ್ತೀರ್ಣ |
|---|---|---|
| ಪಡ್ನೂರು | 65/1ಎ2 | 5.30 |
| | 65/2 | 30.43 |

| ಗ್ರಾಮ | ಸ.ನಂ. | ವಿಸ್ತೀರ್ಣ |
|---|---|---|
| ಕಬಕ | 198/1ಬಿ1 | 2.00 |
| | 198/1ಬಿ2 | 2.00 |
| | 198/1ಬಿ3 | 1.05 |
| ಒಟ್ಟು | | **40.78** |

2. ನಂತರ ದಿನಾಂಕ 8–5–2001 ರಿಂದ ಅನ್ವಯಿಸುವಂತೆ ಗುತ್ತಿಗೆ ಅವಧಿಯನ್ನು ಇನ್ನೂ 30 ವರ್ಷಗಳ ಅವಧಿಗೆ ವಿಸ್ತರಿಸುವಲ್ಲಿ ಅಂತಹ ಭೂಮಿಯ ವಿಸ್ತೀರ್ಣವು 38.79 ಎಕರೆ ಆಗಿರುತ್ತದೆ. ಸ್ಥಳೀಯ ಅವಶ್ಯಕತೆಗಳನ್ವಯ ರಸ್ತೆಯ ಅಗಲೀಕರಣ/ದುರಸ್ತಿ ಆಗಿರುವ ಹಿನ್ನೆಲೆಯಲ್ಲಿ ಭೂಮಿಯ ವಿಸ್ತೀರ್ಣ ಕಡಿಮೆಯಾಗಿದ್ದು, ಪ್ರಸ್ತುತ 37.22 ಎಕರೆ ಲಭ್ಯವಿರುತ್ತದೆ.

3. ಕಾರ್ಯದರ್ಶಿ, ವಿವೇಕಾನಂದ ವಿದ್ಯಾವರ್ಧಕ ಸಂಘ ಪುತ್ತೂರು(ರಿ) ಇವರು ದಿನಾಂಕ 04.04.2012 ರಂದು ಮನವಿ ಸಲ್ಲಿಸುತ್ತಾ, ಹಾಲಿ ಗುತ್ತಿಗೆ ಆಧಾರದ ಮೇಲೆ ಹೊಂದಿರುವ ಭೂಮಿಯ ಜೊತೆಗೆ ಪಡ್ನೂರು, ಕಬಕ ಮತ್ತು ಪುತ್ತೂರು (ಕಸಬಾ) ಗ್ರಾಮಗಳಲ್ಲಿ ಇನ್ನೂ 16.31 ಎಕರೆ ವಿಸ್ತೀರ್ಣದ ಭೂಮಿಯನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

4. ಆ ಮೇರೆಗೆ ಪಡ್ನೂರು ಮತ್ತು ಕಬಕ ಗ್ರಾಮಗಳಲ್ಲಿ ಗುತ್ತಿಗೆ ಆಧಾರದ ಮೇಲೆ ನೀಡಲಾದ ಭೂಮಿಯ ಜೊತೆಗೆ ಪಡ್ನೂರು, ಕಬಕ ಮತ್ತು ಪುತ್ತೂರು (ಕಸಬಾ) ಗ್ರಾಮಗಳಲ್ಲಿ 16.31 ಎಕರೆ ಭೂಮಿಯು ಸೇರಿದಂತೆ ಒಟ್ಟು 53.53 ಎಕರೆ ಭೂಮಿಯನ್ನು ವಿವೇಕಾನಂದ ವಿದ್ಯಾವರ್ಧಕ ಸಂಘ(ರಿ) ಇವರಿಗೆ ಮಂಜೂರು ಮಾಡಲು ದಿನಾಂಕ 20–04–2012ರ ಪತ್ರದಲ್ಲಿ ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ ಇವರು ಪ್ರಸ್ತಾವನೆ ಸಲ್ಲಿಸಿದ್ದು, ಸಂಬಂಧಪಟ್ಟ ವಿವರ ಈ ಕೆಳಗಿನಂತಿದೆ:–

| ಗ್ರಾಮ | ಸ.ನಂ. | ವಿಸ್ತೀರ್ಣ |
|---|---|---|
| ಪಡ್ನೂರು | 64/2ಎ1ಪಿ2 | 10.70 |
| | 65/2ಪಿ4 | 0.36 |
| ಕಬಕ | 198/1ಸಿ | 1.85 |
| | 198/2 | 2.99 |
| | 271/1ಎ4ಪಿ2 | 0.06 |
| | 271/1ಎ5 | 0.15 |
| | 271/1ಎ1ಪಿ2 | 0.10 |
| ಪುತ್ತೂರು(ಕಸಬಾ) | 320/1ಎ2 | 0.10 |
| ಒಟ್ಟು | | **16.31** |

5. ಈ ಕುರಿತಂತೆ ಉಪ ವಿಭಾಗಾಧಿಕಾರಿ, ಪುತ್ತೂರು ಇವರು ದಿನಾಂಕ 21–3–2012ರ ಪತ್ರದಲ್ಲಿ ವಿವರಿಸಿರುವ ಪ್ರಕಾರ ಕಬಕ ಗ್ರಾಮದ ಸ.ನಂ.271/1ಎ1 ರಲ್ಲಿ 0.10 ಎಕರೆ ಮತ್ತು ಸ.ನಂ.271/1ಎ5 ರಲ್ಲಿ 0.15 ಎಕರೆ ರಸ್ತೆ ಪೊರಂಬೋಕು ಜಮೀನು ಆಗಿದ್ದು 53.53 ಎಕರೆ ಪೈಕಿ 53.28 ಎಕರೆ ಜಮೀನು ಮಾತ್ರ ಲಭ್ಯವಿರುತ್ತದೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಕಂಇ 71 ಎಲ್‌ಜಿಎ 2012 ಬೆಂಗಳೂರು ದಿನಾಂಕ 16–07–2012**

ದಕ್ಷಿಣ ಕನ್ನಡ ಜಿಲ್ಲೆ, ಪುತ್ತೂರು ತಾಲ್ಲೂಕು, ಪಡ್ನೂರು ಮತ್ತು ಕಬಕ ಗ್ರಾಮಗಳಲ್ಲಿ ದಿನಾಂಕ 05–03–1969ರಿಂದ ಅನ್ವಯಿಸುವಂತೆ ಗುತ್ತಿಗೆ ಆಧಾರದ ಮೇಲೆ ನೀಡಲಾದ 40.78 ಎಕರೆ ಸರ್ಕಾರಿ ಭೂಮಿ ಪೈಕಿ ಪ್ರಸ್ತುತ ಲಭ್ಯವಿರುವ 37.22 ಎಕರೆ ಭೂಮಿಯ ಜೊತೆಗೆ ಪಡ್ನೂರು, ಕಬಕ ಮತ್ತು ಪುತ್ತೂರು (ಕಸಬಾ) ಗ್ರಾಮಗಳಲ್ಲಿ 16.31 ಎಕರೆ ಸೇರಿಸಿ (ಕಬಕ ಗ್ರಾಮದ ಸ.ನಂ.271/1ಎ1 ರಲ್ಲಿ 0.10 ಎಕರೆ ಮತ್ತು ಸ.ನಂ.271/1ಎ5 ರಲ್ಲಿ 0.15 ಒಟ್ಟು 0.25 ಎಕರೆ ಹೊರತುಪಡಿಸಿ) ಈ ಕೆಳಗಿನಂತೆ ಒಟ್ಟು 53.28 ಎಕರೆ ವಿಸ್ತೀರ್ಣದ ಭೂಮಿಯನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳ (1969) ನಿಯಮ 21 ಹಾಗೂ 27ರ ಅನ್ವಯ ವಿವೇಕಾನಂದ ವಿದ್ಯಾವರ್ಧಕ ಸಂಘ ಪುತ್ತೂರು (ರಿ) ಇವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಮಾರ್ಗಸೂಚಿ ಬೆಲೆಯ ಶೇಕಡ 25 ರಷ್ಟನ್ನು ವಿಧಿಸಿ ಮಂಜೂರು ಮಾಡಲಾಗಿದೆ.

| ತಾಲ್ಲೂಕು | ಗ್ರಾಮ | ಸರ್ವೆ ನಂಬರ್ | ಭೂಮಿಯ ಪ್ರವರ್ಗ | ಭೂಮಿಯ ವಿಸ್ತೀರ್ಣ (ಎಕರೆಗಳಲ್ಲಿ) |
|---|---|---|---|---|
| ಪುತ್ತೂರು | ಪಡ್ನೂರು | 65/2ಪಿ4 | ಖುಷ್ಕಿ | 0.36 |
| | | 65/2ಪಿ2 | ಖುಷ್ಕಿ | 28.62 |
| | | 65/1ಎ1ಬಿಪಿ2 | ಖುಷ್ಕಿ | 3.75 |
| | | 64/2ಎ1ಪಿ2 | ಖುಷ್ಕಿ | 10.70 |
| | ಕಬಕ | 198/1ಬಿ1 | ಖುಷ್ಕಿ | 1.85 |
| | | 198/1ಬಿ2ಪಿ2 | ಖುಷ್ಕಿ | 0.33 |
| | | 198/1ಬಿ2ಪಿ3 | ಖುಷ್ಕಿ | 1.00 |
| | | 198/1ಬಿ3 | ಖುಷ್ಕಿ | 1.67 |
| | | 198/1ಸಿ | ಖುಷ್ಕಿ | 1.85 |
| | | 198/2 | ಪೊರಂಬೋಕು | 2.99 |
| | | 271/1ಎ4ಪಿ2 | ಜಿಆರ್ | 0.06 |
| | ಪುತ್ತೂರು (ಕಸಬಾ) | 320/ಎ2 | ಜಿಆರ್ | 0.10 |
| | | | ಒಟ್ಟು | 53.28 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಲ್.ಕೃಷ್ಣಪ್ಪ**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ ಮಂ-2)

**ಪಿ.ಆರ್. 1959**

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:-** 2009-10 ರಲ್ಲಿ ಮಂಜೂರಾದ ಪ.ಜಾತಿ/ಪ.ವರ್ಗ/ಹಿಂ.ವರ್ಗಗಳ ಮತ್ತು ಅಲ್ಪಸಂಖ್ಯಾತರ ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜುಗಳಿಗೆ ಮಂಜೂರಾದ ಹುದ್ದೆಗಳನ್ನು ಖಾಯಂ ಆಗಿ ಭರ್ತಿ ಮಾಡಲು ಆದೇಶ ನೀಡುವ ಬಗ್ಗೆ.

**ಓದಲಾಗಿದೆ:-**
1. ಸರ್ಕಾರಿ ಆದೇಶ ಸಂ:ಸಕಇ 33 ಮೊದೇಶಾ 2008, ದಿನಾಂಕ:07-07-2009.
2. ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಇವರ ಪತ್ರ ಸಂ::ಕವಶಿಸಸ/ ಸಿಆರ್(ಶಿ)-04/2009-10/3703, ದಿನಾಂಕ 01-03-2012.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖ(1)ರ ಆದೇಶದಲ್ಲಿ ಜಿಲ್ಲೆಗೆ ಒಂದರಂತೆ ಒಟ್ಟು 29 ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜನ್ನು ಮಂಜೂರು ಮಾಡಲಾಗಿದೆ. ಸದರಿ ಕಾಲೇಜುಗಳಿಗೆ ವಿವಿಧ ವೃಂದದ 19 ಹುದ್ದೆಗಳನ್ನು ಸೃಜಿಸಲು ಮಂಜೂರಾತಿ ನೀಡಿದೆ.

ಮೇಲೆ ಓದಲಾದ ಉಲ್ಲೇಖ(2)ರ ಪತ್ರದಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇವರು ಪ್ರಸ್ತಾವನೆ ಸಲ್ಲಿಸಿ, 2009-10ನೇ ಸಾಲಿಗೆ ಮಂಜೂರಾದ ಪ.ಜಾತಿ/ಪ.ವರ್ಗ/ಹಿಂ.ವರ್ಗಗಳ ಮತ್ತು ಅಲ್ಪಸಂಖ್ಯಾತರ ಮೊರಾರ್ಜಿ ದೇಸಾಯಿ ಪದವಿ ಪೂರ್ವ ಕಾಲೇಜುಗಳಿಗೆ ಮಂಜೂರಾದ ಹುದ್ದೆಗಳನ್ನು ಖಾಯಂ ಆಗಿ ಭರ್ತಿ ಮಾಡಲು ಆರ್ಥಿಕ ಮಿತವ್ಯಯ ಆದೇಶದನ್ವಯದಲ್ಲಿ ಹುದ್ದೆಗಳನ್ನು ಭರ್ತಿ ಮಾಡಲಾಗಿರುವುದಿಲ್ಲ. ಸದರಿ ಕಾಲೇಜುಗಳಲ್ಲಿ ಹೊರ ಸಂಪನ್ಮೂಲ ಏಜೆನ್ಸಿಗಳ ಮೂಲಕ ಪಡೆಯಲಾಗಿರುವ ಉಪನ್ಯಾಸಕರ ಸೇವೆ ತೃಪ್ತಿಕರವಾಗಿಲ್ಲದೆ ಫಲಿತಾಂಶವು ಕುಂಠಿತವಾಗಿರುತ್ತದೆ ಹಾಗೂ ವಿದ್ಯಾರ್ಥಿಗಳ ಪೋಷಕರಿಂದ ಹುದ್ದೆಗಳನ್ನು ಖಾಯಂ ಮಾಡುವಂತೆ ಮನವಿಗಳು ಬಂದಿದ್ದು, ಪ.ಜಾತಿ/ಪ.ವರ್ಗ/ಹಿಂ.ವರ್ಗಗಳ ವಿದ್ಯಾರ್ಥಿಗಳು ಉನ್ನತ ವ್ಯಾಸಂಗದಲ್ಲಿ ಉನ್ನತ ಅಂಕಗಳನ್ನು ಪಡೆಯಲು ನುರಿತ ಶಿಕ್ಷಕರಿಂದ ವಿದ್ಯಾಭ್ಯಾಸ ನೀಡಬೇಕಾಗಿರುತ್ತದೆ. ಹಾಗೂ ಸದರಿ ವಿದ್ಯಾರ್ಥಿಗಳು ಸಿ.ಇ.ಟಿ ಮತ್ತು ಕಾಮೆಡ್-ಕೆ, ಪರೀಕ್ಷೆಗಳಲ್ಲಿ ಭಾಗವಹಿಸಬೇಕಾಗಿರುತ್ತದೆ. ಈ ಮಧ್ಯೆ

ಹಿಂದುಳಿದ ವರ್ಗಗಳ ಕಲ್ಯಾಣ ಸಮಿತಿ ಹಾಗೂ ಅನುಸೂಚಿತ ಜಾತಿ ಮತ್ತು ಪಂಗಡಗಳ ಕಲ್ಯಾಣ ಸಮಿತಿಗಳ ಸಭೆಯಲ್ಲಿ ಉತ್ತಮ ಗುಣಮಟ್ಟದ ಶಿಕ್ಷಣದ ದೊರೆಯದೆ ಇರುವುದರಿಂದ ಅಧ್ಯಕ್ಷರು ಹಾಗೂ ಸದಸ್ಯರು ಖಾಯಂ ಆಗಿ ಭರ್ತಿ ಮಾಡಲು ಸೂಚಿಸಿರುವ ಹಿನ್ನೆಲೆಯಲ್ಲಿ 29 ಕಾಲೇಜುಗಳಿಗೆ ಪ್ರಾಂಶುಪಾಲರು ಮತ್ತು ಉಪನ್ಯಾಸಕರ ಒಟ್ಟು 232 ಹುದ್ದೆಗಳನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೃಂದ ಮತ್ತುನೇಮಕಾತಿ ವಿನಿಯಮಗಳು 2011ಕ್ಕೆ ಸೇರ್ಪಡೆ ಮಾಡಿ ಆದೇಶಿಸಿದೆ.

ಮೇಲ್ಕಂಡ ಅಂಶಗಳಂತೆ ಈ ವಸತಿ ಕಾಲೇಜುಗಳಿಗೆ ಮಂಜೂರಾದ ಪ್ರಾಂಶುಪಾಲರು ಮತ್ತು ಉಪನ್ಯಾಸಕರ ಒಟ್ಟು 232 ಹುದ್ದೆಗಳನ್ನು ಅತಿ ಶೀಘ್ರವಾಗಿ ಭರ್ತಿ ಮಾಡಬೇಕಾಗಿದ್ದು, ಈ ಹುದ್ದೆಗಳನ್ನು ಖಾಯಂ ಆಗಿ ಭರ್ತಿ ಮಾಡಲು ಆರ್ಥಿಕ ಇಲಾಖೆಯನ್ನು ಕೋರುವಂತೆ ಉಳಿದ ಹುದ್ದೆಗಳನ್ನು ಹೊರಸಂಪನ್ಮೂಲ ಏಜೆನ್ಸಿ ಮೂಲಕ ಪಡೆಯಲು ಅನುಮತಿ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಕಇ 33 ಮೋದೇಶಾ 2008, ಬೆಂಗಳೂರು, ದಿನಾಂಕ: 04–07–2012**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ 2009–10ರಲ್ಲಿ ಮಂಜೂರಾದ ಪ.ಜಾತಿ/ಪ.ವರ್ಗ/ಹಿಂ.ವರ್ಗಗಳ ಮತ್ತು ಅಲ್ಪಸಂಖ್ಯಾತರ 29 ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜುಗಳಿಗೆ ಈ ಕೆಳಗೆ ತಿಳಿಸಿರುವಂತೆ 464 ಹುದ್ದೆಗಳನ್ನು ಭರ್ತಿ ಮಾಡಲು ಆದೇಶಿಸಿದೆ.

| ಕ್ರಮ.ಸಂ | ಹುದ್ದೆಯ ಪದನಾಮ | ಸಂಖ್ಯೆ | ಷರಾ |
|---|---|---|---|
| 1. | ಪ್ರಾಂಶುಪಾಲರು | 29 | ವೃಂದ ಮತ್ತು ನೇಮಕಾತಿ ನಿಯಮದನ್ವಯ |
| 2. | ಭಾಷಾ ಉಪನ್ಯಾಸಕರು | 58 | |
| 3. | ಐಚ್ಛಿಕ ವಿಷಯ ಉಪನ್ಯಾಸಕರು | 145 | |
| 4. | ನಿಲಯಪಾಲಕರು | 29 | |
| 5. | ದ್ವಿತೀಯ ದರ್ಜೆ ಸಹಾಯಕರು (SDA) (ಗಣಕ ಯಂತ್ರ ಜ್ಞಾನವುಳ್ಳವರು) | 29 | |
| 6. | ಗ್ರೂಪ್–ಡಿ ನೌಕರರ | 58 | ಹೊರಸಂಪನ್ಮೂಲದಿಂದ |
| 7. | ಅಡುಗೆಯವರು | 58 | |
| 8. | ಅಡುಗೆ ಸಹಾಯಕರು | 58 | |
| **ಒಟ್ಟು** | | **464** | |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆಇ 445 ವೆಚ್ಚ–3/12, ದಿನಾಂಕ:25–06–2012 ರಡಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ.ರತ್ನಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಮಾಜ ಕಲ್ಯಾಣ ಇಲಾಖೆ.

**ಪಿ.ಆರ್. 1932**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:–** ಶ್ರೀ ಎಸ್.ಸುರೇಶ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ, ಮೈಸೂರು ಇವರ ವಿರುದ್ಧ ಶಿಸ್ತುಕ್ರಮ –ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1] ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರದ ಸಂಖ್ಯೆ:ಕೈವಾಇ/ಸಿ1/94/2008–09 ದಿನಾಂಕ:27.02.2009

2] ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರದ ಸಂಖ್ಯೆ:ಕೈವಾಇ/1/94/2008–09 ದಿನಾಂಕ:16.04.2009

3] ಕಾರಣ ಕೇಳುವ ನೋಟೀಸ್ ದಿನಾಂಕ:12.08.2009.

4] ಕಾರಣ ಕೇಳುವ ನೋಟೀಸಿಗೆ ಅಧಿಕಾರಿಯ ಲಿಖಿತ ರಕ್ಷಣಾ ಹೇಳಿಕೆ ದಿನಾಂಕ: 28.08.2009.

5] ಸರ್ಕಾರದ ಆದೇಶ ಸಂಖ್ಯೆ:ವಾಕೈ/218/ಕೈಸೇವಿ/2007 ದಿನಾಂಕ:31.10.2009

6] ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರದ ಸಂಖ್ಯೆ:ಕೈವಾಇ/ನಿರಿ1 94/2008–09 ದಿನಾಂಕ:13.11.2009

7] ಎರಡನೇ ಕಾರಣ ಕೇಳುವ ನೋಟೀಸ್ ದಿ:13.07.2010.

8] ಎರಡನೇ ಕಾರಣ ಕೇಳುವ ನೋಟೀಸಿಗೆ ಅಧಿಕಾರಿಯ ಲಿಖಿತ ರಕ್ಷಣಾ ಹೇಳಿಕೆ ದಿನಾಂಕ:02.08.2010 ಹಾಗೂ ದಿನಾಂಕ: 01,09.2010.

9] ಸರ್ಕಾರದ ಆದೇಶ ಸಂಖ್ಯೆ:ವಾಕೈ/218/ಕೈಸೇವಿ/2007 ಬೆಂಗಳೂರು, ದಿನಾಂಕ:13.07.2010

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರು ಶ್ರೀ ಎಸ್.ಸುರೇಶ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ, ಮೈಸೂರು ರವರು ವಿದ್ಯಾವರ್ಧಕ ಇಂಜಿನಿಯರಿಂಗ್ ಕಾಲೇಜ್ ಮೈಸೂರಿನಲ್ಲಿ ಉಪನ್ಯಾಸಕರಾಗಿ ಹಾಗೂ ಸಹ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿರುವ ಬಗ್ಗೆ ಹಾಗೂ ವೇತನ ಪಡೆದಿರುವ ಬಗ್ಗೆ, ವೇತನ ಬಡ್ತಿಗಳನ್ನು ಸಂಚಿತ ರಹಿತ ಪರಿಣಾಮವಾಗಿ ತಡೆ ಹಿಡಿದಿರುವ ಬಗ್ಗೆ ಉಪನ್ಯಾಸಕ ಹಾಗೂ ಸಹ ಪ್ರಾಧ್ಯಾಪಕರ ಹುದ್ದೆಗಳಿಂದ ವಜಾ ಮಾಡಿರುವ ಬಗ್ಗೆ ವಿವರಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರು ಶ್ರೀ ಎಸ್. ಸುರೇಶ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಮೈಸೂರು, ಇವರು ವಿದ್ಯಾವರ್ಧಕ ಇಂಜಿನಿಯರಿಂಗ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಹಾಗೂ ದಿನಾಂಕ: 05.09.2005 ರಿಂದ 15.10.2008 ರವರೆಗೆ ಖಾಯಂ ಸಹ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸಿರುವ ಬಗ್ಗೆ ಶಿಸ್ತುಕ್ರಮ ಕೈಗೊಳ್ಳಲು ದೋಷರೋಪಣಾ ಪಟ್ಟಿ ಅನುಬಂಧ 1 ರಿಂದ 4 ರವರೆಗೆ ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಶ್ರೀ ಎಸ್. ಸುರೇಶ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಮೈಸೂರು, ಇವರು, ಮೈಸೂರು ವಿದ್ಯಾವರ್ಧಕ ಇಂಜನಿಯರಿಂಗ್ ಕಾಲೇಜಿನಲ್ಲಿ ದಿನಾಂಕ:12.10.2000 ರಿಂದ 01.07.2004 ರವರೆಗೆ ಉಪನ್ಯಾಸಕರಾಗಿ ಹಾಗೂ ದಿನಾಂಕ: 05.09.2005 ರಿಂದ 15.10.2008 ರವರೆಗೆ ಖಾಯಂ ಸಹ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸಿ, ಎಸಗಿರುವ ಆರೋಪಗಳ ಬಗ್ಗೆ ಶಿಸ್ತುಕ್ರಮ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 11 ರಡಿ ಇಲಾಖಾ ವಿಚಾರಣೆ ನಡೆಸಲು ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿ ಇನ್ನಿತರೆ ಅನುಬಂಧಗಳನ್ನು ದಿನಾಂಕ:12.08.2009 ರಂದು ಜಾರಿಗೊಳಿಸಲಾಗಿತ್ತು,

ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಕಾರಣ ಕೇಳುವ ನೋಟೀಸಿಗೆ ಶ್ರೀ ಎಸ್. ಸುರೇಶ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಮೈಸೂರು, ಇವರು ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ, ಎಲ್ಲಾ ಆರೋಪಗಳನ್ನು ಒಪ್ಪಿಕೊಳ್ಳುತ್ತಾ, ಸರ್ಕಾರದ ಪೂರ್ವಾನುಮತಿ ಪಡೆಯದೆ ಬೋಧನ ಕಾರ್ಯವನ್ನು ನಿರ್ವಹಿಸಿದ್ದಕ್ಕಾಗಿ ವಿಷಾಧಿಸುತ್ತಾ ಸರ್ಕಾರದ ಕ್ಷಮೆ ಯಾಚಿಸುತ್ತಾ ಸರ್ಕಾರವು ತೀರ್ಮಾನಿಸುವ ಹಣವನ್ನು ಸರ್ಕಾರಕ್ಕೆ ಜಮಾ ಮಾಡಲು ಸಹ ಬದ್ಧನಾಗಿರುವುದಾಗಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಆದೇಶದಲ್ಲಿ ಶ್ರೀ ಎಸ್. ಸುರೇಶ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಮೈಸೂರು, ಇವರು, ದಿನಾಂಕ:12.10.2000 ರಿಂದ 01.07.2004 ರವರೆಗೆ ಮೈಸೂರು ವಿದ್ಯಾವರ್ಧಕ ಇಂಜನಿಯರಿಂಗ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಹಾಗೂ ದಿನಾಂಕ:05.09.2005 ರಿಂದ 15.10.2008 ರವರೆಗೆ ಖಾಯಂ ಸಹ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸಿ, ಆ ಅವಧಿಗೆ ವೇತನವನ್ನು ಸಹ ಕಾಲೇಜುವತಿಯಿಂದ ಪಡೆದಿರುವುದು, ಇವರು ಒಬ್ಬ ಜವಾಬ್ದಾರಿಯುತ ಸರ್ಕಾರಿ ಅಧಿಕಾರಿಯಾಗಿದ್ದು, ಸರ್ಕಾರಿ ಕೆಲಸ ನಿರ್ವಹಿಸುತ್ತಿದ್ದಾಗ ಖಾಸಗಿ ಕೆಲಸ ನಿರ್ವಹಿಸಿರುವುದು ಕಾನೂನು ಬಾಹಿರವಾಗಿರುತ್ತದೆ. ಒಟ್ಟಾರೆ ಸರ್ಕಾರದ ನೀತಿ ನಿಯಮಗಳನ್ನು ಉಲ್ಲಂಘಿಸಿರುವುದು ನಿಯಮಗಳನ್ನು ಪಾಲಿಸದೆ ಕರ್ತವ್ಯಲೋಪ ದುರ್ನಡತೆ ಎಸಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮ 11 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಬಿ.ಎಲ್..ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಉಪ ನಿರ್ದೇಶಕರು (ಆಡಳಿತ) ಕೇಂದ್ರ ಕಚೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು, ಶ್ರೀ ಎಸ್. ಸುರೇಶ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಮೈಸೂರು ಇವರು ಎಲ್ಲಾ ಆರೋಪಗಳನ್ನು ಒಪ್ಪಿಕೊಂಡಿರುವುದರಿಂದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ನಿಯಮಗಳನ್ವಯ ಸರ್ಕಾರದ ಹಂತದಲ್ಲಿ ಕ್ರಮ ಕೈಗೊಳ್ಳಲು ಕೈಗಾರಿಕಾಭಿವೃದ್ಧಿ ಆಯುಕ್ತರು ಸರ್ಕಾರಕ್ಕೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7) ರ ಕಾರಣ ಕೇಳುವ ನೋಟೀಸಿನಲ್ಲಿ ನೈಸರ್ಗಿಕ ನ್ಯಾಯಪಾಲನಾ ಕ್ರಮವಾಗಿ ಶ್ರೀ ಎಸ್. ಸುರೇಶ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಮೈಸೂರು, ಇವರಿಗೆ, ಮೈಸೂರು ವಿದ್ಯಾವರ್ಧಕ ಇಂಜನಿಯರಿಂಗ್ ಕಾಲೇಜಿನಲ್ಲಿ ದಿನಾಂಕ: 12.10.2000 ರಿಂದ 01.07.2004 ರವರೆಗೆ ಉಪನ್ಯಾಸಕರಾಗಿ ಹಾಗೂ ದಿ: 05.09.2005 ರಿಂದ 15.10.2008 ರವರೆಗೆ ಖಾಯಂ ಸಹ

ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸಿ, ಆ ಅವಧಿಗೆ ವೇತನವನ್ನು ಸಹ ಕಾಲೇಜುವತಿಯಿಂದ ಪಡೆದಿರುವುದು, ಒಬ್ಬ ಜವಾಬ್ದಾರಿಯುತ ಸರ್ಕಾರಿ ಅಧಿಕಾರಿಯಾಗಿದ್ದು, ಸರ್ಕಾರಿ ಕಾರ್ಯನಿರ್ವಹಿಸುತ್ತಿದ್ದಾಗ ಖಾಸಗಿ ಕೆಲಸ ನಿರ್ವಹಿಸಿರುವುದು ನಿಯಮ ಬಾಹಿರವಾಗಿರುತ್ತದೆ. ದಿನಾಂಕ:28.08.2009 ರ ತಮ್ಮ ಪತ್ರದಲ್ಲಿ ತಾವು ಆರೋಪಗಳನ್ನು ಯಾವುದೇ ಷರತ್ತುಗಳಿಲ್ಲದೆ ಒಪ್ಪಿಕೊಂಡಿರುತ್ತೀರಿ. ಹಾಗೂ ತಪ್ಪೊಪ್ಪಿಗೆಯು ಸ್ಪಷ್ಟವೂ ನಿಸ್ಸಂಧಿಗ್ಧವೂ ಆಗಿದ್ದು ಸಂಶಯಕ್ಕೆ ಆಸ್ಪದವಿರುವಿದಿಲ್ಲ.ಸದರಿ ಆರೋಪಗಳು ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮದಡಿ ಪ್ರದತ್ತವಾದ ಅಧಿಕಾರ ಉಪಯೋಗಿಸಿಸೇವೆಯಿಂದ ವಜಾಗೊಳಿಸಲು ಶಿಸ್ತು ಪ್ರಾಧಿಕಾರ ತೀರ್ಮಾನಿಸಿರುತ್ತದೆ. ಈ ಪ್ರಸ್ತಾವಿತ ಕ್ರಮದ ಬಗ್ಗೆ ತಮ್ಮ ರಕ್ಷಣಾ ಹೇಳಿಕೆಯನ್ನು ಲಿಖಿತ ರೂಪದಲ್ಲಿ 15 ದಿನಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ ಕೋರಲಾಗಿದೆ. ತಪ್ಪಿದಲ್ಲಿ ಈ ಬಗ್ಗೆ ನೀಡಬಹುದಾದ ಹೇಳಿಕೆ ಸಲ್ಲಿಸಬಹುದಾದ ದಾಖಲೆ ಇತ್ಯಾದಿಗಳೇನು ಇಲ್ಲವೆಂದು ಭಾವಿಸಿ, ತಮ್ಮ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957 ರ ನಿಯಮ 8 ರಡಿಯಲ್ಲಿ ದಂಡನೆ ವಿಧಿಸಲು ಸೂಕ್ತ ಕ್ರಮಕೈಗೊಳ್ಳಲಾಗುವುದೆಂದು ಎಂದು ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (8) ರ ಮನವಿಯಲ್ಲಿ ಶ್ರೀ ಎಸ್. ಸುರೇಶ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ, ಮೈಸೂರು ಇವರು ಆರೋಪದ ವಿರುದ್ಧ ಷರತ್ತಿಲ್ಲದೆ ಒಪ್ಪಿಕೊಂಡಿದ್ದು ತಪ್ಪೊಪ್ಪಿಗೆಯು ಸ್ಪಷ್ಟವೂ ನಿಸ್ಸಂಧಿಗ್ಧವೂ ಆಗಿದ್ದು ಸಂಶಯಕ್ಕೆ ಆಸ್ಪದವಿರುವುದಿಲ್ಲವೆಂಬುವುದಾಗಿ ಭಾವಿಸಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳ ಪ್ರಕಾರ ಕಠಿಣ ದಂಡನೆ ವಿಧಿಸಲು ಆರೋಪ ಸಾಬೀತಾಗಿರುವುದಾಗಿ ಪೂರ್ವೋಚಿತವಾಗಿ ನಿರ್ಧರಿಸಿರುವುದರಿಂದ ಭಾರತ ಸಂವಿಧಾನದ ಅನುಚ್ಛೇಧ 311 ರ ಅಡಿಯಲ್ಲಿ ಆರೋಪಿತ ಸರ್ಕಾರಿ ನೌಕರ/ಅಧಿಕಾರಿ ಸಂವಿಧಾನಬದ್ಧವಾಗಿ ಲಭ್ಯವಿರುವ ಯುಕ್ತಾವಕಾಶಗಳಿಂದ ವಂಚಿಸಿದಂತಾಗುತ್ತದೆ. ಅಲ್ಲದೆ ಈಗಾಗಲೇ ನೀಡಲಾಗಿರುವ ನೋಟೀಸಿಗೆ ನಿಗದಿತ ಸಮಯದಲ್ಲಿ ಉತ್ತರ ಸಲ್ಲಿಸಲು ಅಸಹಾಯಕನಾಗಿದ್ದೇನೆಂದು ತಿಳಿಸಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳ ಬಗ್ಗೆ ತಿಳಿದಿರುವ ತಜ್ಞರನ್ನು ಸಂಪರ್ಕಿಸಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಬೇಕಾಗಿರುವುದರಿಂದ ಪ್ರಸ್ತುತ ನೀಡಿರುವ ಕಾಲಾವಕಾಶವು ಸಾಲದೆ ಇರುವುದರಿಂದ ಪ್ರಕರಣದಲ್ಲಿ ಆರೋಪಗಳ ಕುರಿತು ಸಲ್ಲಿಸಲಾಗಿರುವ ಸಮಜಾಯಿಷಿಯನ್ನು ತಪ್ಪಾಗಿ ಅರ್ಥೈಸಲಾಗಿದೆ ಎಂಬ ಅಂಶವನ್ನು ಸರ್ಕಾರಕ್ಕೆ ಸಲ್ಲಿಸಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಲು ಹೆಚ್ಚುವರಿಯಾಗಿ ಒಂದು ತಿಂಗಳ ಕಾಲಾವಕಾಶವನ್ನು ನೀಡುವಂತೆ ಸರ್ಕಾರಕ್ಕೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (9) ರ ಸರ್ಕಾರದ ಅದೇಶದಲ್ಲಿ ಶ್ರೀ ಎಸ್. ಸುರೇಶ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಮೈಸೂರು, ಇವರ ವಿರುದ್ಧ ಸರ್ಕಾರ ಜಾರಿಗೊಳಿಸಿದ್ದ ಕಾರಣ ಕೇಳುವ ನೋಟೀಸಿಗೆ ಅಧಿಕಾರಿಗಳು ಸಲ್ಲಿಸಿರುವ ಹೇಳಿಕೆಯಲ್ಲಿ ಅರೋಪಗಳನ್ನು ಯಾವುದೇ ಷರತ್ತಿಲ್ಲದೆ ಒಪ್ಪಿಕೊಂಡಿದ್ದು ತಪ್ಪೊಪ್ಪಿಗೆಯು ಸ್ಪಷ್ಟವೂ ನಿಸ್ಸಂಧಿಗ್ಧವೂ ಆಗಿದ್ದು ಶಿಸ್ತು ಪ್ರಾಧಿಕಾರವು ಈ ಅಂಶವನ್ನು ಗಮನದಲ್ಲಿರಿಸಿಕೊಂಡು ಅಧಿಕಾರಿಯ ವಿರುದ್ಧ ಗುರುತರ ದಂಡನೆ ವಿಧಿಸಲು ನಿರ್ಧಾರ ಕೈಗೊಂಡಿರುವುದರಿಂದ ಹಾಗೂ ಶಿಕ್ಷೆಯ ಬಗ್ಗೆ ಅಧಿಕಾರಿಗಳ ವಿರುದ್ಧ ನೈಸರ್ಗಿಕ ನ್ಯಾಯಪಾಲನಾ ಕ್ರಮವಾಗಿ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿರುವುದರಿಂದ, ಸರ್ಕಾರದ ಆದೇಶ ಸಂಖ್ಯೆ:218 ಕೈಸೇವಿ 2007 ದಿನಾಂಕ:31.10.2009 ಅನ್ನು ಹಿಂಪಡೆಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ/218/ಕೈಸೇವಿ/2007 ಬೆಂಗಳೂರು,ದಿನಾಂಕ:30.06.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ಸುರೇಶ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆ, ಮೈಸೂರು ಇವರು ಮೈಸೂರು ವಿದ್ಯಾವರ್ಧಕ ಇಂಜನಿಯರಿಂಗ್ ಕಾಲೇಜಿನಲ್ಲಿ ದಿನಾಂಕ: 12.10.2000 ರಿಂದ 01.07.2004 ರವರೆಗೆ ಉಪನ್ಯಾಸಕರಾಗಿ ಹಾಗೂ ದಿನಾಂಕ: 05.09.2005 ರಿಂದ 15.10.2008 ರವರೆಗೆ ಖಾಯಂ ಸಹ ಪ್ರಾಧ್ಯಾಪಕರಾಗಿ ಸರ್ಕಾರಿ ಸೇವೆಯಲ್ಲಿದ್ದುಕೊಂಡು ಈ ಅವಧಿಗೆ ಶಿಕ್ಷಣ ಸಂಸ್ಥೆಯಿಂದ ವೇತನ ಪಡೆದಿರುವುದರಿಂದ ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 8 (VIII) ರಂತೆ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ ಮತ್ತು ಶಿಕ್ಷಣ ಸಂಸ್ಥೆಯಿಂದ ವೇತನ ರೂಪದಲ್ಲಿ ಸ್ವೀಕರಿಸಿದ ಮೊತ್ತವನ್ನು ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಾತಿ ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರೇಣುಕಾರಾಧ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
(ಸೇವೆಗಳು)

**ಪಿ.ಆರ್. 1942**

## ಶಿಕ್ಷಣ ಸಚಿವಾಲಯ

**ವಿಷಯ:** ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ನಡೆಸುತ್ತಿರುವ **ಬೀದರ್‌ನ ಡಾ: ಬಿ.ಆರ್.ಅಂಬೇಡ್ಕರ್ ಕಲಾ ಮತ್ತು ವಿಜ್ಞಾನ ಪ್ರಥಮ ದರ್ಜೆ ಕಾಲೇಜಿನ ಬೋಧಕರ** ಹುದ್ದೆಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು

**ಓದಲಾಗಿದೆ:**

1) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 551 ಯುಪಿಸಿ 99 ದಿನಾಂಕ: 07-08-2003
2) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ:13-05-2009
3) ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ: 05-10-2009
4) ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:23:ಕಾವೇಅನು/ಗುವಿ/ಖಾಕಾವಿ-2/2010-11/ನೇವಿ, ದಿನಾಂಕ:26-11-2011.
5) ಸಚಿವ ಸಂಪುಟದ ಟಿಪ್ಪಣಿ ಸಂಖ್ಯೆ:ಸಿ:215/2012, ದಿನಾಂಕ:21-05-2012.
6) ಸರ್ಕಾರಿ ಆದೇಶ ಸಂಖ್ಯೆ:ಇಡಿ 228 ಯುಪಿಸಿ 2011, ದಿನಾಂಕ:15-06-2012.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯನ್ವಯ ರಚಿಸಲಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ನಿಯಮ 8(1)ರನ್ವಯ ದಿನಾಂಕ: 01-06-1987ರ ನಂತರ ಪ್ರಾರಂಭಿಸಲಾದ ಯಾವುದೇ ಖಾಸಗಿ ಪದವಿ ಕಾಲೇಜುಗಳು ಮತ್ತು ವಿಷಯಗಳನ್ನು ಅನುದಾನದ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲ.

ರಾಜ್ಯದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಗಳು ದಿನಾಂಕ:01-06-1987ರಿಂದ ದಿನಾಂಕ:31-03-1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲಾಗುತ್ತಿರುವ ಕಾಲೇಜುಗಳು ಮತ್ತು ಕೋರ್ಸ್‌ಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ತೀರ್ಮಾನಿಸಿ ಈ ಕುರಿತು ನಿಯಮಗಳನ್ನು ರಚಿಸಲು ದಿನಾಂಕ:18-02-2009ರಂದು ಜರುಗಿದ ಸಚಿವ ಸಂಪುಟ ಸಭೆಯು ಅನುಮೋದನೆ ನೀಡಿದೆ.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಯಿಂದ ನಡೆಸಲ್ಪಡುತ್ತಿರುವ ಖಾಸಗಿ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ ಮಾತ್ರ ಮೇಲೆ ಹೇಳಿದ ನಿಯಮ 8ಕ್ಕೆ ಸೂಕ್ತ ಸೇರ್ಪಡೆ ಮಾಡಿ ದಿನಾಂಕ: 01-06-87 ರಿಂದ 31-03-95ರ ಅವಧಿಯಲ್ಲಿ ಪ್ರಾರಂಭಿಸಲ್ಪಟ್ಟ ಪರಿಶಿಷ್ಠ ಜಾತಿ / ಪರಿಶಿಷ್ಠ ಪಂಗಡದವರು ನಡೆಸುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೊಳಪಡಿಸಲು ಓದಲಾದ (2)ರ ದಿನಾಂಕ:13-05-2009ರ ಅಧಿಸೂಚನೆಯಲ್ಲಿ ಸೂಕ್ತ ತಿದ್ದುಪಡಿ ಮಾಡಿ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಓದಲಾದ (3)ರ ದಿನಾಂಕ: 05-10-2009ರಲ್ಲಿ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01-06-1987 ರಿಂದ 31-03-1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಕೆಲವು ಮಾನದಂಡಗಳನ್ನು ನಿಗಧಿಪಡಿಸಿ ಆದೇಶ ಹೊರಡಿಸಿದೆ. ಮೇಲೆ ಓದಲಾದ(4)ರ ದಿನಾಂಕ: 20-04-2011ರ ಪ್ರಸ್ತಾವನೆಯಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಸದರಿ ಕಾಲೇಜಿನ ಯಾವ ಯಾವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವರ್ಗದವರನ್ನು ವೇತನಾನುದಾನಕ್ಕೆ ಒಳಪಡಿಸಬೇಕು ಎಂಬುದನ್ನು ಪರಿಶೀಲಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸದರಿ ಕಾಲೇಜನ್ನು ಹಾಗೂ ಅದರಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು. ಈಗಾಗಲೇ ಪರಿಶಿಷ್ಠ ಜಾತಿ / ಪರಿಶಿಷ್ಠ ಪಂಗಡದವರು ನಡೆಸುತ್ತಿರುವ 5 ಕಾಲೇಜುಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ವಿಧಿಸಲಾಗಿದ್ದ ಷರತ್ತುಗಳೊಂದಿಗೆ ಹೆಚ್ಚುವರಿಯಾಗಿ ಕೆಲವು ಷರತ್ತುಗಳನ್ನು ವಿಧಿಸಿ ಅವುಗಳನ್ನು ಪೂರೈಸಿದ್ದಲ್ಲಿ ಎರಡನೇ ಹಂತವಾಗಿ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಆರ್ಥಿಕ ಇಲಾಖೆಯು ತಿಳಿಸಿದೆ. ಆದರೆ, ಪ್ರಥಮ ಹಂತವಾಗಿ ವೇತನಾನುದಾನಕ್ಕೆ ಒಳಪಡಿಸಲಾದ 5 ಕಾಲೇಜುಗಳಿಗೆ ವಿಧಿಸದೇ ಇದ್ದ ಹೆಚ್ಚುವರಿ ಷರತ್ತುಗಳನ್ನು ವಿಧಿಸಿತ್ತು. ಈ ಹೆಚ್ಚುವರಿ ಷರತ್ತುಗಳನ್ನು ವಿಧಿಸದಂತೆ ವಿನಾಯಿತಿ ನೀಡುವಂತೆ ಸಚಿವ ಸಂಪುಟದ ಅನುಮೋದನೆ ಕೋರಲಾಗಿದ್ದು, ಸಚಿವ ಸಂಪುಟವು ಮೇಲೆ ಓದಲಾದ (5)ರಲ್ಲಿ ಆರ್ಥಿಕ ಇಲಾಖೆಯು ಹೆಚ್ಚುವರಿಯಾಗಿ ವಿಧಿಸಿರುವ ಷರತ್ತುಗಳನ್ನು ಸಡಿಲಿಸಿ, ಸದರಿ ಕಾಲೇಜು ಹಾಗೂ ಸದರಿ ಕಾಲೇಜಿನಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರ್ಹ ಬೋಧಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಅನುಮತಿ ನೀಡಿದೆ. ಅದರಂತೆ, ಕಾಲೇಜು ಶಿಕ್ಷಣ ನಿರ್ದೇಶನಾಲಯದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಲಾದ ಅಭ್ಯರ್ಥಿಗಳ ವಿದ್ಯಾರ್ಹತೆ, ವಿಷಯಗಳ ಕಾರ್ಯಭಾರ ಮತ್ತು ಮೀಸಲಾತಿ ಪರಿಶೀಲಿಸಿ ಸದರಿ ಕಾಲೇಜನ್ನು ಮತ್ತು ಕಾಲೇಜಿನಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರುಗಳನ್ನು ವೇತನಾನುದಾನದ ವ್ಯಾಪ್ತಿಗೆ ಈಗಾಗಲೇ ಮೇಲೆ ಓದಲಾದ (6)ರ ಆದೇಶದಲ್ಲಿ ಒಳಪಡಿಸಲಾಗಿರುತ್ತದೆ. ಆದರೆ, ಶ್ರೀಮತಿ ಮಾರ್ತಾ.ಬಿ., ಆಂಗ್ಲಭಾಷಾ ಉಪನ್ಯಾಸಕರು ಇವರನ್ನು ವೇತನಾನುದಾನಕ್ಕೆ ಒಳಪಡಿಸುವ ವಿಷಯಕ್ಕೆ ಸಂಬಂಧಿಸಿದಂತೆ 2011-12ನೇ ಸಾಲಿನಲ್ಲಿ ಒಟ್ಟು 12 ಗಂಟೆಗಳ ಕಾರ್ಯಭಾರವಿರುವುದರಿಂದ ಸರ್ಕಾರದ ದಿನಾಂಕ:18-11-1991ರ ಆದೇಶ ಸಂಖ್ಯೆ:ಇಡಿ 159 ಯುಪಿಸಿ 1991ರಲ್ಲಿ ಏಕವ್ಯಕ್ತಿ ವಿಭಾಗಗಳನ್ನು ವೇತನಾನುದಾನಕ್ಕೆ ಒಳಪಡಿಸಬೇಕಾಗಿದ್ದಲ್ಲಿ ಕನಿಷ್ಠ 12 ಗಂಟೆಗಳ ಕಾರ್ಯಭಾರ ಇರಬೇಕೆಂಬ ನಿರ್ದೇಶನದ ಹಿನ್ನೆಲೆಯಲ್ಲಿ ಸದರಿ ಆದೇಶದಂತೆ ವೇತನಾನುದಾನಕ್ಕೆ ಪರಿಗಣಿಸಿ ಉಳಿದ 4 ಗಂಟೆಗಳ ಕಾರ್ಯಭಾರವನ್ನು ಇತರೆ ಖಾಸಗಿ / ಸರ್ಕಾರಿ ಕಾಲೇಜುಗಳಲ್ಲಿ ನಿಯೋಜನೆಯ ಮೇಲೆ ಕಾರ್ಯ ನಿರ್ವಹಿಸುವಂತೆ ಸೂಚಿಸಿ ಸದರಿಯವರನ್ನು ಯುಜಿಸಿ ವೇತನ ಶ್ರೇಣಿಯಡಿ ಹಾಗೂ ಶ್ರೀ ಡಿ.ಇಂದ್ರಜಿತ್, ದೈಹಿಕ ಶಿಕ್ಷಣ ಬೋಧಕರು ಇವರು ಯುಜಿಸಿ ಮಾರ್ಗಸೂಚಿಗಳನ್ವಯ ನಿಗದಿತ ವಿದ್ಯಾರ್ಹತೆಯಾದ ಎನ್.ಇ.ಟಿ./ಎಸ್.ಎಲ್.ಇ.ಟಿ./ಪಿ.ಹೆಚ್.ಡಿ. ವಿದ್ಯಾರ್ಹತೆಯನ್ನು ಹೊಂದಿಲ್ಲದ ಕಾರಣ

ಸದರಿಯವರು ದಿನಾಂಕ:05–07–2006ರಿಂದ ಸದರಿ ಕಾಲೇಜಿನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವುದರಿಂದ ಶ್ರೀ ಇಂದ್ರಜಿತ್, ದೈಹಿಕ ಶಿಕ್ಷಣ ಬೋಧಕರು ಇವರನ್ನು ರಾಜ್ಯ ವೇತನ ಶ್ರೇಣಿಯಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಅನುದಾನದ ವ್ಯಾಪ್ತಿಗೆ ಒಳಪಡಿಸಲು ಸರ್ಕಾರ ತೀರ್ಮಾನಿಸಲಾಯಿತು. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 228 ಯುಪಿಸಿ 2011 ಬೆಂಗಳೂರು ದಿನಾಂಕ:05–07–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ **ಬೀದರ್‌ನ ಡಾ: ಬಿ.ಆರ್.ಅಂಬೇಡ್ಕರ್ ಕಲಾ ಮತ್ತು ವಿಜ್ಞಾನ ಪ್ರಥಮ ದರ್ಜೆ ಕಾಲೇಜನ್ನು** ವೇತನಾನುದಾನದ ವ್ಯಾಪ್ತಿಗೆ ತರಲಾಗಿದ್ದು, ಸದರಿ ಕಾಲೇಜಿನಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯ ನಿರ್ವಹಿಸುತ್ತಿರುವ ಕೆಳಕಂಡ ಅರ್ಹ ಸಹಾಯಕ ಪ್ರಾಧ್ಯಾಪಕರು ಹಾಗೂ ಅವರುಗಳು ಬೋಧಿಸುತ್ತಿರುವ ಹುದ್ದೆ / ವಿಷಯಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

| ಕ್ರಮ ಸಂಖ್ಯೆ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನು ದಾನಕ್ಕೆ ಒಳಪಡಿಸಿದ ಹುದ್ದೆ / ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನು ದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯ ಭಾರ | ವೇತನ ಶ್ರೇಣಿ |
|---|---|---|---|---|---|---|
| 1 | ಶ್ರೀಮತಿ ಮಾರ್ತಾ.ಬಿ. | ಆಂಗ್ಲಭಾಷಾ ಉಪನ್ಯಾಸಕರು | ಅನ್ವಯಿಸುವುದಿಲ್ಲ. | 01 | 12 ಗಂಟೆ | ಯುಜಿಸಿ |
| 2 | ಶ್ರೀ ಡಿ.ಇಂದ್ರಜಿತ್, | ದೈಹಿಕ ಶಿಕ್ಷಣ ಬೋಧಕರು | ಅನ್ವಯಿಸುವುದಿಲ್ಲ. | 01 | – | ರಾಜ್ಯ ವೇತನ ಶ್ರೇಣಿ |

1. ಒಂದು ವೇಳೆ ಈ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಟ್ಟ ಬೋಧಕರುಗಳ ಪೈಕಿ ಯಾವುದೇ ಅನರ್ಹತೆ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ, ವೇತನಾನುದಾನವನ್ನು ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.

2. ಈ ನೇಮಕಾತಿಗಳಲ್ಲಿ ಮೀಸಲಾತಿಯಲ್ಲಿ ವ್ಯತ್ಯಾಸವಾಗಿರುವುದು ಕಂಡುಬಂದಲ್ಲಿ ಅಂಥವರ ವೇತನಾನುದಾನವನ್ನು ಸಹ ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.

3. ವೇತನಾನುದಾನದ ವ್ಯಾಪ್ತಿಗೆ ಒಳಪಟ್ಟಂತಹ ಮೇಲ್ಕಂಡ ಉಪನ್ಯಾಸಕರುಗಳ ವೇತನವನ್ನು ಆದೇಶ ಹೊರಡಿಸಿದ ದಿನಾಂಕದಿಂದ ವಿಸ್ತರಿಸಿರುವ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನದಲ್ಲಿ ನಿಗದಿ ಪಡಿಸತಕ್ಕದ್ದು. ಹಾಗೂ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲಾದ ಪೂರ್ವದಲ್ಲಿ ಸಲ್ಲಿಸಿರುವ ಸೇವೆಯನ್ನು ಯಾವುದೇ ಸೇವಾ ಹಾಗೂ ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸುವಂತಿಲ್ಲ.

4. ದಿನಾಂಕ:11–07–2009ರ ಪೂರ್ವದಲ್ಲಿ ನೇಮಕಾತಿ ಹೊಂದಿದವರು ಎಂ.ಫಿಲ್. ಪದವಿ ಹೊಂದಿದ್ದಲ್ಲಿ ಯುಜಿಸಿ ವೇತನ ಶ್ರೇಣಿ ನೀಡಲು ಪರಿಗಣಿಸಲಾಗುತ್ತಿದೆ. ಆದರೆ, ಈ ಪ್ರಕರಣದಲ್ಲಿ ಬಹುತೇಕ ಉಪನ್ಯಾಸಕರುಗಳು ದಿನಾಂಕ:11–07–2009ರ ಪೂರ್ವದಲ್ಲಿ ನಡೆದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದು, ಅವರುಗಳ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ವಿಶ್ವವಿದ್ಯಾಲಯಗಳು ದಿನಾಂಕ:11–07–2009ರ ನಂತರ ವಿತರಿಸಿದೆ. ಈ ಹಿನ್ನೆಲೆಯಲ್ಲಿ ಅವರುಗಳಿಗೆ ಯುಜಿಸಿ ವೇತನ ಶ್ರೇಣಿ ವಿಸ್ತರಿಸುವ ಸಂಬಂಧ ಯಾವ ದಿನಾಂಕವನ್ನು ಅಂದರೆ ಪರೀಕ್ಷೆ ನಡೆದ ದಿನಾಂಕ ಅಥವಾ ಪ್ರಮಾಣ ಪತ್ರ ವಿತರಿಸಿರುವ ದಿನಾಂಕ ಈ ಎರಡರಲ್ಲಿ ಯಾವ ದಿನಾಂಕ ಪರಿಗಣಿಸಬೇಕು ಎಂಬುದರ ಕುರಿತು ಇಂತಹ ಬೇರೆ ಪ್ರಕರಣಗಳಲ್ಲಿ ಸಿಆಸು ಇಲಾಖೆ / ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಲಾಗುತ್ತಿದೆ. ಆದುದರಿಂದ, ಒಂದು ವೇಳೆ ಸರ್ಕಾರವು ವೇತದಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ ಎಂ.ಫಿಲ್. ವಿದ್ಯಾರ್ಹತೆಯನ್ನು ಪ್ರಮಾಣ ಪತ್ರ ವಿತರಿಸಿರುವ ದಿನಾಂಕದಿಂದ ಪರಿಗಣಿಸುವಂತೆ ನಿರ್ಧಾರ ಕೈಗೊಂಡಲ್ಲಿ ಯುಜಿಸಿ ವೇತನ ಶ್ರೇಣಿ ಹಿಂದಕ್ಕೆ ಪಡೆದು ಅಂತಹ ಉಪನ್ಯಾಸಕರುಗಳಿಗೆ ರಾಜ್ಯ ವೇತನ ಶ್ರೇಣಿಯಲ್ಲಿ ವೇತನ ಪುನರ್ ಪರಿಷ್ಕರಿಸುವ ಷರತ್ತಿಗೊಳಪಟ್ಟಿರುತ್ತದೆ.

5. ವೇತನಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ ಕಾರ್ಯಭಾರದಲ್ಲಿ ಕೊರತೆ ಉದ್ಭವಿಸಿದ ಪಕ್ಷದಲ್ಲಿ ಅಂತಹ ಉಪನ್ಯಾಸಕರುಗಳನ್ನು ಕಾರ್ಯಭಾರ ಇರುವಂತಹ ಅನುದಾನಿತ ಕಾಲೇಜು / ಸರ್ಕಾರಿ ಕಾಲೇಜುಗಳ ಕಾರ್ಯಭಾರದ ಎದುರಾಗಿ ನಿಯೋಜನೆ ಮೇಲೆ ಮರು ಹಂಚಿಕೆ ಮಾಡುವ ಷರತ್ತಿಗೊಳಪಟ್ಟಿದೆ.

6. ಸಂಸ್ಥೆಯ ಬೈಲಾದಲ್ಲಿ ನಿಗಧಿಪಡಿಸಿರುವಂತೆ ಆಡಳಿತ ಮಂಡಳಿಯ ಎಲ್ಲಾ ಪದಾಧಿಕಾರಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರೇ ಆಗಿರಬೇಕು. ಒಂದು ವೇಳೆ ಅನ್ಯ ವರ್ಗದ ವ್ಯಕ್ತಿಯನ್ನು ಆಡಳಿತ ಮಂಡಳಿಯ ಪದಾಧಿಕಾರಿಗಳಾಗಿ ಆಯ್ಕೆ ಮಾಡಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

7. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು, 2003ರ ನಿಯಮ 15(ಇ)ರಡಿಯಲ್ಲಿ ನಿಗದಿಪಡಿಸಿರುವ ಅಪೆಂಡಿಕ್ಸ್ (2)ರಲ್ಲಿ ಸೂಚಿಸಿರುವಂತೆ ಬೋಧನಾ ಕೊಠಡಿಗಳು, ಪ್ರಯೋಗಾಲಯಗಳು, ಶೌಚಾಲಯ ಇತ್ಯಾದಿಗಳನ್ನು ಒಳಗೊಂಡ ಮೂಲಭೂತ ಸೌಕರ್ಯಗಳನ್ನು ಸಂಸ್ಥೆಯು ಒದಗಿಸಿರತಕ್ಕದ್ದು.

8. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಅಂತಹ ಕಾಲೇಜುಗಳಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಕನಿಷ್ಠ ಶೇಕಡಾ 35ರಷ್ಟು ಇರತಕ್ಕದ್ದು. ಪ್ರವೇಶಾವಕಾಶದಲ್ಲಿ ನಿಗದಿಪಡಿಸಿರುವ ವಿದ್ಯಾರ್ಥಿಗಳ ಕನಿಷ್ಠ ಪ್ರಮಾಣವನ್ನು ವಿವರವಾಗಿ ಅನುಸರಿಸತಕ್ಕದ್ದು. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

9. ವಿಶ್ವವಿದ್ಯಾಲಯದವರು ನಿಗದಿಪಡಿಸಿರುವ ಸರಾಸರಿ ಪ್ರವೇಶಾತಿಗೆ ಸಮಾನಾಂತರವಾಗಿ ಈ ಕಾಲೇಜುಗಳು ಕನಿಷ್ಠ ಪ್ರವೇಶಾತಿಯನ್ನು ಮಾಡಿಕೊಳ್ಳತಕ್ಕದ್ದು ಮತ್ತು ಪ್ರವೇಶಾತಿ (enrollment) ಪಡೆದ ಕಾಲೇಜಿನ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 75ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುವಂತೆ ಕ್ರಮವಹಿಸತಕ್ಕದ್ದು. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

10. ಇಂತಹ ಕಾಲೇಜುಗಳಲ್ಲಿನ ಪರೀಕ್ಷಾ ಫಲಿತಾಂಶಗಳು ಸಂಬಂಧಪಟ್ಟ ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಇತರೆ ಕಾಲೇಜುಗಳಲ್ಲಿನ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಇರತಕ್ಕದಲ್ಲ. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

11. ಈ ರೀತಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಾರಂಭವಾದ ಪದವಿ ಕಾಲೇಜುಗಳನ್ನು ಮಧ್ಯದಲ್ಲಿ ಯಾವುದೇ ವಿಚ್ಛಿನ್ನತೆ ಇಲ್ಲದೆ ಸತತವಾಗಿ ನಡೆಸಿರಬೇಕು. ವಿಚ್ಛಿನ್ನತೆ ಉಂಟಾದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.]

12. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ಮತ್ತು ಇತರ ಸಂಬಂಧಿತ ನಿಯಮಗಳಡಿಯಲ್ಲಿ ನಿಗಧಿಪಡಿಸಿರುವಂತೆ ಮಾದರಿ ಸಿಬ್ಬಂದಿಯನ್ವಯ ನೇಮಕಾತಿ ಮಾಡಿಕೊಳ್ಳತಕ್ಕದ್ದು. ಪ್ರತಿಯೊಂದು ತರಗತಿಯಲ್ಲಿ ನಿಗಧಿತ ಕನಿಷ್ಠ ಮಟ್ಟದ ವಿದ್ಯಾರ್ಥಿ ಹಾಜರಾತಿ ಸಂಖ್ಯಾಬಲವನ್ನು ಹೊಂದಿರತಕ್ಕದ್ದು. ಪದವಿ ಕಾಲೇಜುಗಳಿಗೆ ಸಂಬಂಧಪಟ್ಟಂತೆ ಪ್ರತಿಯೊಂದು ತರಗತಿಯಲ್ಲಿ ಕನಿಷ್ಠ 40 ವಿದ್ಯಾರ್ಥಿಗಳ ಹಾಜರಾತಿ ಕಡ್ಡಾಯವಾಗಿರಬೇಕು. ಭಾಷಾ ವಿಷಯದಲ್ಲಿ ಕನಿಷ್ಠ 10 ವಿದ್ಯಾರ್ಥಿಗಳು ಹಾಗೂ ಐಚ್ಛಿಕ ವಿಷಯಗಳಿಗೆ ಕನಿಷ್ಠ 15 ವಿದ್ಯಾರ್ಥಿಗಳ ಸಂಖ್ಯೆ ಇರಬೇಕು.

13. ನಿಗಧಿತ ಮೂಲಭೂತ ಸೌಲಭ್ಯಗಳಲ್ಲದೆ ಸ್ವಂತ ಕಟ್ಟಡ ಮತ್ತು ಆಟದ ಮೈದಾನಗಳನ್ನು ಹೊಂದಿರತಕ್ಕದ್ದು. ಇವುಗಳನ್ನು ಹೊಂದದೇ ಇರುವ ಸಂಸ್ಥೆಗಳ ಪ್ರಕರಣಗಳಲ್ಲಿ ಈ ಮೂಲಭೂತ ಸೌಲಭ್ಯಗಳನ್ನು ಹೊಂದಲು ಸಹಾಯಾನುದಾನಕ್ಕೆ ಒಳಪಡಿಸಿದ ದಿನಾಂಕದಿಂದ ಮೂರು ವರ್ಷಗಳ ಕಾಲಾವಕಾಶ ನೀಡಬಹುದು. ಹಾಗೂ ಮೂರು ವರ್ಷಗಳ ನಂತರವೂ ಈ ಸೌಲಭ್ಯಗಳನ್ನು ಒದಗಿಸದೇ ಇದ್ದಲ್ಲಿ ಸಹಾಯಾನುದಾನವನ್ನು ನಿಲ್ಲಿಸಲಾಗುವುದು.

14. ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿ ಪಡೆಯದೇ ಮಾಡತಕ್ಕದ್ದಲ್ಲ.

15. ನೇರ ನೇಮಕಾತಿ, ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರದ ನಿಯಮಗಳು/ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

16. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕರ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಪೂರ್ವಾನುಮತಿ ಪಡೆಯುವುದು ಮತ್ತು ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

17. ಅನುಮೋದಿತ ಹುದ್ದೆಗಳಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ಸರ್ಕಾರದ ಮತ್ತು ಯುಜಿಸಿ ನಿಯಮಗಳ ಪ್ರಕಾರ ವಯೋಮಿತಿ : ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.

18. ಸದರಿ ಕಾಲೇಜಿನಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿರುವಂತಹ ಬೋಧಕರ ವೇತನವನ್ನು ಪ್ರಥಮ 5 ವರ್ಷಗಳ ಅವಧಿಗೆ ಇಲಾಖೆಗೆ ನಿಗದಿ ಪಡಿಸಲಾದ ಯೋಜನೆ ಹಂಚಿಕೆಯಲ್ಲಿಯೇ ವೆಚ್ಚ ಭರಿಸತಕ್ಕದ್ದು.

ಪ್ರತೀ ವರ್ಷವೂ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಸಂಬಂಧಪಟ್ಟ ಜಂಟಿ ನಿರ್ದೇಶಕರು ದೃಢೀಕರಿಸಿದ ನಂತರವೇ ಆಯಾ ವರ್ಷದ ವೇತನಾನುದಾನ ಬಿಡುಗಡೆ ಮಾಡುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿದೆ. ನ್ಯೂನ್ಯತೆಗಳಾದಲ್ಲಿ ಸಂಬಂಧಪಟ್ಟ ಜಂಟಿ ನಿರ್ದೇಶಕರೇ ಜವಾಬ್ದಾರರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ:936/ವೆಚ್ಚ–8/2011, ದಿನಾಂಕ:07–02–2012 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಮನೋಹರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

**ಪಿ.ಆರ್. 1930**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಗದಗ ಜಿಲ್ಲೆಯ ನರಗುಂದ ಕಂದಾಯ ತಾಲ್ಲೂಕಿನಲ್ಲಿನ ನೋಟರಿ ಹುದ್ದೆ ಭರ್ತಿ ಬಗ್ಗೆ (ಶ್ರೀ ಬಿ.ಬಿ.ಉಳ್ಳಾಗಡ್ಡಿ, ನೋಟರಿ, ನರಗುಂದ ಇವರ ನಿಧನದ ಪ್ರಯುಕ್ತ)

**ಓದಲಾಗಿದೆ:**
1. ಶ್ರೀ ಎಂ.ಎಸ್. ಪಾಟೀಲ್, ಜಿಲ್ಲಾ ಪಂಚಾಯಿತಿ ಸದಸ್ಯರು, ನರಗುಂದ ಗದಗ ಇವರ ಮನವಿ ದಿನಾಂಕ: 13–10–2011
2. ಸರ್ಕಾರದ ಪತ್ರ ಸಂಖ್ಯೆ: ಲಾ 317 ಎಲ್‌ಸಿಎಲ್ 2011 ದಿನಾಂಕ:03–11–2011.
3. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಇವರ ಪತ್ರ ಸಂಖ್ಯೆ: 3201 / 2011 ದಿನಾಂಕ:23–11–2011.
4. ಸರ್ಕಾರದ ಪತ್ರ ಸಂಖ್ಯೆ: ಲಾ 317 ಎಲ್‌ಸಿಎಲ್ 2011 ದಿನಾಂಕ: 30–12–2011 ಮತ್ತು 28–02–2012.
5. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಇವರ ಪತ್ರ ಸಂಖ್ಯೆ: 726/2012 ದಿನಾಂಕ: 07–03–2012
6. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಜಿಎಸ್ ಆರ್ 114 (ಇ) ದಿನಾಂಕ: 24–02–2009.
7. ಅಧಿಸೂಚನೆ ಸಂಖ್ಯೆ: ಲಾ 61 ಎಲ್ ಸಿ ಎಲ್ 2009 ದಿನಾಂಕ: 24–07–2010.
8. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 317 ಎಲ್‌ಸಿಎಲ್ 2011 ದಿನಾಂಕ: 30–04–2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಜಿಲ್ಲಾ ಪಂಚಾಯಿತಿ ಸದಸ್ಯರು ನರಗುಂದ ಇವರ ಮನವಿ ದಿನಾಂಕ: 13.10.2011ರಲ್ಲಿ ತಿಳಿಸಿರುವಂತೆ ಶ್ರೀ ಬಿ.ಬಿ.ಉಳ್ಳಾಗಡ್ಡಿ, ನೋಟರಿ, ನರಗುಂದ ಇವರ ನಿಧನದ ಬಗ್ಗೆ ವಕೀಲರ ಸಂಘದಿಂದ ದೃಡಪಡಿಸಿಕೊಂಡು, ಅವರ ದೃಢೀಕೃತ ಮರಣ ಪ್ರಮಾಣ ಪತ್ರವನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಇವರನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 03–11–2011ರ ಪತ್ರದಲ್ಲಿ ಕೋರಲಾಗಿದ್ದು, ಅದರಂತೆ (3)ರಲ್ಲಿ ಓದಲಾದ ದಿನಾಂಕ: 23–11–2011ರಲ್ಲಿ ಸದರಿಯವರ ಮರಣ ಪ್ರಮಾಣ ಪತ್ರವನ್ನು ಒದಗಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಇದೇ ಕಡತ ಸಂಖ್ಯೆಯ ದಿನಾಂಕ: 30–12–2011 ಮತ್ತು 28–02–2012ರಲ್ಲಿ ಶ್ರೀ ಬಿ.ಬಿ. ಉಳ್ಳಗಡ್ಡಿ, ನೋಟರಿ, ನರಗುಂದ ಇವರ ನಿಧನದಿಂದ ತೆರವಾದ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳನ್ವಯ ಅಧಿಸೂಚನೆ ಹೊರಡಿಸುವ ಮೂಲಕ ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗದಗ ಇವರನ್ನು ಕೋರಲಾಗಿತ್ತು.

ಅದರಂತೆ (5)ರಲ್ಲಿ ಓದಲಾದ ದಿನಾಂಕ: 07–03–2012ರ ಪತ್ರದೊಂದಿಗೆ 10 ಜನರ ಮೆಮೋರಿಯಲ್ಸ್ ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ (6)ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ (7)ರಲ್ಲಿ ಓದಲಾದ ದಿನಾಂಕ: 24–07–2010ರ ಅಧಿಸೂಚನೆಯಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (8)ರಲ್ಲಿ ಓದಲಾದ ದಿನಾಂಕ: 30–04–2012ರ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 317 ಎಲ್‌ಸಿಎಲ್ 2011 ಬೆಂಗಳೂರು ದಿನಾಂಕ: 02–07–2012**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ ನಿಯಮ 8 (1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ಅಡೆಪ್ಪನವರ್ ಸಂಗಮೇಶ್ವರ ಸಿದ್ದಪ್ಪ, ಮೂಗನೂರು, ಬನಹಟ್ಟಿ ಪೋಸ್ಟ್, ನರಗುಂದ ತಾಲ್ಲೂಕು, ಗದಗ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ನರಗುಂದ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ. 1000.00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ಲಕ್ಷ್ಮೀನರಸಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)(ಪ್ರ)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಪಿ.ಆರ್. 1939**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಕೆ.ಆರ್.ನಗರ ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ನೇಮಕಾತಿ ಬಗ್ಗೆ

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಲಾ 201 ಎಲ್‌ಸಿಎಲ್ 2010 ದಿನಾಂಕ: 19–11–2011
2 ಸರ್ಕಾರದ ಪತ್ರ ಸಂಖ್ಯೆ: ಲಾ 201 ಎಲ್‌ಸಿಎಲ್ 2010 ದಿನಾಂಕ:03–01–2012.
3. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು ಜಿಲ್ಲೆ ಇವರ ಪತ್ರ ಸಂಖ್ಯೆ: ಸಿಆರ್‌ಆರ್/ ನೋಟರಿ/4173/ 2012 ದಿನಾಂಕ:19–03–2012.
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 114 (ಇ) ದಿನಾಂಕ: 24–02–2009.
5. ಅಧಿಸೂಚನೆ ಸಂಖ್ಯೆ: ಲಾ 61 ಎಲ್ ಸಿ ಎಲ್ 2009 ದಿನಾಂಕ: 24–07–2010.
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 201 ಎಲ್‌ಸಿಎಲ್ 2010 ದಿನಾಂಕ: 28–04–2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ಸಂಖ್ಯೆ: ಲಾ 201 ಎಲ್‌ಸಿಎಲ್ 2010 ದಿನಾಂಕ: 19–11–2011ರಲ್ಲಿ ಸಾರ್ವಜನಿಕರ ಹಿತದೃಷ್ಟಿಯಿಂದ ಮೈಸೂರು ಜಿಲ್ಲೆಗೆ ಒಂದು ನೋಟರಿ ಹುದ್ದೆಯನ್ನು ಸೃಜನೆ ಮಾಡಲಾಗಿದ್ದು, ಈ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳನ್ವಯ ಅಧಿಸೂಚನೆ ಹೊರಡಿಸುವ ಮೂಲಕ ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು ಇವರನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 03–01–2012ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ:19–03–2012ರ ಪತ್ರದೊಂದಿಗೆ 8 ಜನರ ಮೆಮೋರಿಯಲ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ (4)ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ (5)ರಲ್ಲಿ ಓದಲಾದ ದಿನಾಂಕ: 24–07–2010ರ ಅಧಿಸೂಚನೆಯಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (6)ರಲ್ಲಿ

ಓದಲಾದ ದಿನಾಂಕ:28–04–2012ರ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 201 ಎಲ್‌ಸಿಎಲ್ 2010 ಬೆಂಗಳೂರು ದಿನಾಂಕ: 06–07–2012**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ ನಿಯಮ 8 (1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ವಿಜಯಕುಮಾರ್ ಲಾಲನಹಳ್ಳಿವಿಲೇಜ್, ಬಸವರಾಜಪುರ ಪೋಸ್ಟ್, ಕಸಬಾ ಹೋಬಳಿ, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ–571602ಯವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಕೆ.ಆರ್.ನಗರ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗಧಿಪಡಿಸಲಾದ ರೂ. 1000.00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ಲಕ್ಷ್ಮೀನರಸಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)(ಪ್ರ)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಪಿ.ಆರ್. 1938**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕಿನ ಚಿತ್‌ಕೋಟಾ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋಧಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಸನೀಇ 12 ಮಸಾವಿ 2011(16) ತಾಂತ್ರಿಕ ದಿನಾಂಕ:13.06.2011

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ ಸನೀ(ಉ) ವಲಯ, ಬಿಜೆಪಿ/ ಎಇ–6/ 2012–13/ 3594/ ದಿನಾಂಕ:22.06.2012

**ಪ್ರಸ್ತಾವನೆ:**

ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕಿನ ಚಿತ್‌ಕೋಟಾ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ.195.00ಲಕ್ಷಗಳ ಅಂದಾಜಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಕೈಗೊಳ್ಳಲು ಭಾರತ ಸರಕಾರದ ಅನುಮೋದನೆ ದೊರಕಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೀದರ್ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 08.12.2011 |
| ಜಿಲ್ಲಾಟೆಂಡರ್ ಬುಲೆಟಿನ್ | 08.12.2011 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 13.12.2012 |

ಇ-ಪ್ರೊಕ್ಯೂರ್‌ಮೆಂಟ್ ಮೂಲಕ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಐದು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 02.06.2012ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.188,98,884/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.1,88,26,999/- |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಸಂತೋಷ ಬಿಲ್ಡ್ ವೆಲ್ ಇನ್‌ಫ್ರಾ ಪ್ರೈ. ಲಿ., ಒಂದನೇ ದರ್ಜೆ ಗುತ್ತಿಗೆದಾರರು | 1,98,20,950/- | 4.88 ಹೆಚ್ಚು | 5.279 ಹೆಚ್ಚು |

ಮೇಲ್ಕಂಡಂತೆ ಮೆ॥ ಸಂತೋಷ ಬಿಲ್ಡ್ ವೆಲ್ ಇನ್‌ಫ್ರಾ ಪ್ರೈ. ಲಿ. , ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 5.279ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಪಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.1,88,26,999/-ಗಳ ಮೇಲೆ ಶೇಕಡಾ 5.279ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,98,20,950/-ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 86 ಅಪಿಬಂ(ತಾಂತ್ರಿಕ) 2012 ಬೆಂಗಳೂರು, ದಿನಾಂಕ: 11ನೇ ಜುಲೈ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕಿನ ಚಿತ್‌ಕೋಟಾ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.1,88,26,999/-ಗಳ ಮೇಲೆ ಶೇಕಡಾ 5.279ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,98,20,950/-ಗಳಿಗೆ (ರೂ. ಒಂದು ಕೋಟಿ ತೊಂಭತ್ತೆಂಟು ಲಕ್ಷ ಇಪ್ಪತ್ತು ಸಾವಿರದ ಒಂಭೈ ನೂರ ಐವತ್ತು ಮಾತ್ರ)ಗಳಿಗೆ ಮೆ॥ ಸಂತೋಷ ಬಿಲ್ಡ್ ವೆಲ್ ಇನ್‌ಫ್ರಾ ಪ್ರೈ. ಲಿ., ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

**ಪಿ.ಆರ್. 2063**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೀದರ್ ಜಿಲ್ಲೆ ಹುಮನಾಬಾದ್ ತಾಲ್ಲೂಕಿನ ಗಡವಂತಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋಧಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಸನೀಇ 12 ಮಸಾವಿ 2011(16) ತಾಂತ್ರಿಕ ದಿನಾಂಕ:13.06.2011

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ) ವಲಯ, ಬಿಜೆಪಿ/ಎಇ-6/2012-13/3424/ ದಿನಾಂಕ:14.06.2012

**ಪ್ರಸ್ತಾವನೆ:**

ಬೀದರ್ ಜಿಲ್ಲೆ ಹುಮನಾಬಾದ್ ತಾಲ್ಲೂಕಿನ ಗಡವಂತಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ.150.00ಲಕ್ಷಗಳ ಅಂದಾಜಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಕೈಗೊಳ್ಳಲು ಭಾರತ ಸರಕಾರದ ಅನುಮೋದನೆ ದೊರಕಿದೆ

ಈ ಕಾಮಗಾರಿಯನ್ನು ಕೈಗೊಳ್ಳಲು ಬೀದರ್ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 26.03.2012 |
| ಜಿಲ್ಲಾಟೆಂಡರ್ ಬುಲೆಟಿನ್ | 24.03.2012 |
| ಕನ್ನಡ ಪ್ರಭ/ವಿಜಯ ಕರ್ನಾಟಕ ದಿನ ಪತ್ರಿಕೆ | 29.03.2012 |
| ಡೆಕ್ಕನ್ ಹೆರಾಲ್ಡ್ ದಿನ ಪತ್ರಿಕೆ | 29.03.2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 09.05.2012ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.1,43,52,392/– | |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.1,43,48,287/– | |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಗುರುನಾಥ ಕೊಳ್ಳೂರ,<br>ಒಂದನೇ ದರ್ಜೆ ಗುತ್ತಿಗೆದಾರರು | 1,64,87,266/– | 14.87<br>ಹೆಚ್ಚು | 14.90<br>ಹೆಚ್ಚು |

ಮೇಲ್ಕಂಡಂತೆ ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 14.90ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,43,48,287/–ಗಳ ಮೇಲೆ ಶೇಕಡಾ 13.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,62,85,306/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 83 ಅಪಿಬಂ(ತಾಂತ್ರಿಕ) 2012 ಬೆಂಗಳೂರು, ದಿನಾಂಕ: 11ನೇ ಜುಲೈ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ ಹುಮನಾಬಾದ್ ತಾಲ್ಲೂಕಿನ ಗಡವಂತಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,43,48,287/–ಗಳ ಮೇಲೆ ಶೇಕಡಾ 13.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,62,85,306/–ಗಳಿಗೆ (ರೂ. ಒಂದು ಕೋಟಿ ಅರವತ್ತೆರಡು ಲಕ್ಷ ಎಂಭತ್ತೈದು ಸಾವಿರದ ಮುನ್ನೂರ ಆರು ಮಾತ್ರ)ಗಳಿಗೆ ಶ್ರೀ ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.

2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

**ಪಿ.ಆರ್. 2064**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬಳ್ಳಾರಿ ಜಿಲ್ಲೆ ಸಿರಗುಪ್ಪ ತಾಲ್ಲೂಕಿನ ಹಾಗಲೂರು ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋಧಿಸುವ ಕುರಿತು

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಸನೀಇ 15 ಮಸಾವಿ 2009ಭಾಗ–1(7) ದಿನಾಂಕ:28.02.2009

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ,ಬಿಜೆಪಿ/ಪಿಬಿ–12/2012–13/3574/ ದಿನಾಂಕ:22.06.2012

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆ ಸಿರಗುಪ್ಪ ತಾಲ್ಲೂಕಿನ ಹಾಗಲೂರು ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ರೂ.180.00ಲಕ್ಷಗಳ ಅಂದಾಜಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಳ್ಳಾರಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 12.12.2011 |
| ಸಂಯುಕ್ತ ಕರ್ನಾಟಕ ದಿನ ಪತ್ರಿಕೆ | 13.12.2011 |
| ಇಂಡಿಯನ್ ಎಕ್ಸ್‌ಪ್ರೆಸ್ ದಿನ ಪತ್ರಿಕೆ | 13.12.2011 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ:24.02.2012ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.1,66,09,736/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.2,20,20,760/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಸಿದ್ದರಾಮಣ್ಣ ಗೌಡ, ಒಂದನೇ ದರ್ಜೆ ಗುತ್ತಿಗೆದಾರರು | 2,33,00,560/– | 40.28 ಹೆಚ್ಚು | 5.81 ಹೆಚ್ಚು |

ಮೇಲ್ಕಂಡಂತೆ ಶ್ರೀ ಸಿದ್ದರಾಮಣ್ಣ ಗೌಡ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 5.81ರಷ್ಟು ಹೆಚ್ಚಾಗಿದ್ದು,

ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,20,20,760/–ಗಳ ಮೇಲೆ ಶೇಕಡಾ 5.81ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 2,33,00,560/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 56 ಏನೀಯೋ (ತಾಂತ್ರಿಕ) 2012 ಬೆಂಗಳೂರು, ದಿನಾಂಕ: 11ನೇ ಜುಲೈ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆ ಸಿರಗುಪ್ಪ ತಾಲ್ಲೂಕಿನ ಹಾಗಲೂರು ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 2,20,20,760/–ಗಳ ಮೇಲೆ ಶೇಕಡಾ 5.81ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 2,33,00,560/–ಗಳಿಗೆ (ರೂ. ಎರಡು ಕೋಟಿ ಮೂವತ್ಮೂರು ಲಕ್ಷದ ಐನೂರ ಅರವತ್ತು)ಗಳಿಗೆ ಶ್ರೀ ಸಿದ್ದರಾಮಣ್ಣ ಗೌಡ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಪಿ.ಆರ್. 2065**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆ ಹಾಗೂ ತಾಲ್ಲೂಕಿನ ಹುದಲಿ ಗ್ರಾಮದ ಹತ್ತಿರ ಬಿದರಿ ನಾಲಾಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋಧಿಸುವ ಕುರಿತು

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಸನೀಇ 03 ನಯೋಕಾ 2011 ದಿನಾಂಕ 18.01.2012

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ ಸನೀ(ಉ) ವಲಯ/ ಬಿಜೆಪಿ/ ಎಇ–1/ 2012–13/ 3411/ ದಿನಾಂಕ:13.06.2012.

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆ ಹಾಗೂ ತಾಲ್ಲೂಕಿನ ಹುದಲಿ ಗ್ರಾಮದ ಹತ್ತಿರ ಬಿದರಿ ನಾಲಾಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ.80.00ಲಕ್ಷಗಳ ಅಂದಾಜಿಗೆ ನಬಾರ್ಡ್‌ನ ಆರ್.ಐ.ಡಿ.ಎಫ್.–17ರಡಿ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 23.04.2012 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 28.04.2012 |
| ಪ್ರಜಾವಾಣಿ ದಿನಪತ್ರಿಕೆ | 28.04.2012 |
| ಟೈಮ್ಸ್ ಆಫ್ ಇಂಡಿಯಾ ದಿನಪತ್ರಿಕೆ | 28.04.2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ:30.05.2012ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | |
|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.73,76,925/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಮೋತಿಚಂದ ಎಸ್. ದರಗ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು | 88,60,835/– | 20.12<br>ಹೆಚ್ಚು |
| ಬಸವರಾಜ ಹೆಚ್. ಹವಳಮ್ಮನವರ, ಒಂದನೇ ದರ್ಜೆ ಗುತ್ತಿಗೆದಾರರು | 89,50,435/– | 21.33<br>ಹೆಚ್ಚು |

ಮೇಲ್ಕಂಡಂತೆ ಶ್ರೀ ಮೋತಿಚಂದ ಎಸ್. ದರಗ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 20.12ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 73,76,925/–ಗಳ ಮೇಲೆ ಶೇಕಡಾ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 82,99,040/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 82 ಅಪಿಬಂ (ತಾಂತ್ರಿಕ) 2012 ಬೆಂಗಳೂರು, ದಿನಾಂಕ: 11ನೇ ಜುಲೈ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಹಾಗೂ ತಾಲ್ಲೂಕಿನ ಹುದಲಿ ಗ್ರಾಮದ ಹತ್ತಿರ ಬಿದರಿ ನಾಲಾಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 73,76,925/–ಗಳ ಮೇಲೆ ಶೇಕಡಾ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 82,99,040/–ಗಳಿಗೆ (ರೂ. ಎಂಬತ್ತೆರಡು ಲಕ್ಷ ತೊಂಭತ್ತೊಂಭತ್ತು ಸಾವಿರದ ನಲವತ್ತು ಮಾತ್ರ)ಗಳಿಗೆ ಶ್ರೀ ಮೋತಿಚಂದ ಎಸ್. ದರಗ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

**ಪಿ.ಆರ್. 2066**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ರಾಯಚೂರ ಜಿಲ್ಲೆ ಸಿಂಧನೂರ ತಾಲ್ಲೂಕಿನ ಪಡಗದಿನ್ನಿ, ಮುದೇನೂರು ಕ್ಯಾಂಪ್ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಮಾಡಿ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ ಸನೀ(ಉ)ವ/ತಾ.ಸ.–3/ಸ.ಇಂ.–7/ಪ್ಯಾಕೇಜ್–7/2012–13/2361 ದಿನಾಂಕ:21.04.2012.

**ಪ್ರಸ್ತಾವನೆ:**

2011–12ನೇ ಸಾಲಿನ ಗಿರಿಜನ ಉಪ ಯೋಜನೆಯಡಿ ಮಂಜೂರಾಗಿರುವ (1) ರಾಯಚೂರ ಜಿಲ್ಲೆ ಸಿಂಧನೂರ ತಾಲ್ಲೂಕಿನ ಪಡಗದಿನ್ನಿ ಗ್ರಾಮದ ಶ್ರೀ ವೀರಪ್ಪ ತಂದೆ ದುರಗಪ್ಪ ಮತ್ತು ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ ಮತ್ತು (2) ರಾಯಚೂರ ಜಿಲ್ಲೆ ಸಿಂಧನೂರ ತಾಲ್ಲೂಕಿನ ಮುದೇನೂರು ಗ್ರಾಮದ ಶ್ರೀ ಸೋಮಣ್ಣ ತಂದೆ ಮಾನಪ್ಪ ಮತ್ತು ಇತರರ ಜಮೀನುಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿ ಈ ಎರಡು ಕಾಮಗಾರಿಗಳ ಒಟ್ಟು ರೂ.15.00ಲಕ್ಷಗಳ ಮೊತ್ತದ ಅಂದಾಜು ಪಟ್ಟಿಗಳಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಇವರ ನೋಂದಣಿ ಸಂಖ್ಯೆ ಕ್ರಮವಾಗಿ 4/11–2012 ಮತ್ತು 2/11–2012ರಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಪ್ಯಾಕೇಜ್ ಆಧಾರದ ಮೇಲೆ ಕುಷ್ಟಗಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 21.01.2012 |
| ವಿಜಯ ಕರ್ನಾಟಕ ದಿನ ಪತ್ರಿಕೆ | 17.01.2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ದಿನಾಂಕ:01.02.2012ರಂದು ಟೆಂಡರನ್ನು ತೆರೆದು ಪರಿಶೀಲಿಸಲಾಗಿದ್ದು ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.12,71,094/– |
|---|---|---|
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಮಹಾವೀರ ಚಂದ ಓಸ್ವಾಲ, ಗುತ್ತಿಗೆದಾರರು | 13,40,893/– | 5.49<br>ಹೆಚ್ಚು |

ಮೇಲ್ಕಂಡಂತೆ ಶ್ರೀ ಮಹಾವೀರ ಚಂದ ಓಸ್ವಾಲ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 5.49ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 12,71,094/–ಗಳ ಮೇಲೆ ಶೇಕಡಾ 5.49ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 13,40,893/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 41 ಏನೀಯೋ(ತಾಂತ್ರಿಕ) 2012 ಬೆಂಗಳೂರು, ದಿನಾಂಕ: 11ನೇ ಜುಲೈ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಯಚೂರ ಜಿಲ್ಲೆ ಸಿಂಧನೂರ ತಾಲ್ಲೂಕಿನ ಪಡಗದಿನ್ನಿ, ಮುದೇನೂರು ಕ್ಯಾಂಪ್ ಗ್ರಾಮದ ಹತ್ತಿರ ಏತ ನೀರಾವರಿ ಯೋಜನೆ ನಿರ್ಮಾಣ ಮಾಡಿ ನೀರಾವರಿ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 12,71,094/–ಗಳ ಮೇಲೆ ಶೇಕಡಾ 5.49ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 13,40,893/–ಗಳಿಗೆ (ರೂ. ಹದಿಮೂರು ಲಕ್ಷ ನಲವತ್ತು ಸಾವಿರದ ಎಂಟು ನೂರ ತೊಂಭತ್ತ ಮೂರು ಮಾತ್ರ)ಗಳಿಗೆ ಶ್ರೀ ಮಹಾವೀರ ಚಂದ ಓಸ್ವಾಲ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.

2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

**ಪಿ.ಆರ್. 2060** ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಸಿದ್ನಾಳ ಗ್ರಾಮದ ಹತ್ತಿರ ವೇದಗಂಗಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋಧಿಸುವ ಕುರಿತು

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 03 ನಯೋಕಾ 2011 ದಿನಾಂಕ 18.01.2012.

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ ಸನೀ(ಉ)ವಲಯ/ ಬಿಜೆಪಿ/ ಎಇ–1/ 2012–13/ 3410/ ದಿನಾಂಕ:13.06.2012

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಸಿದ್ನಾಳ ಗ್ರಾಮದ ಹತ್ತಿರ ವೇದಗಂಗಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ.199.00ಲಕ್ಷಗಳ ಅಂದಾಜಿಗೆ ನಬಾರ್ಡ್‌ನ ಆರ್.ಐ.ಡಿ.ಎಫ್.–17ರಡಿ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 19.04.2012 |
| ಜಿಲ್ಲಾ ಟೆಂಡರ್ ಬುಲೆಟಿನ್ | 23.04.2012 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 21.04.2012 |
| ಕನ್ನಡ ಪ್ರಭ ದಿನಪತ್ರಿಕೆ | 21.04.2012 |
| ಟೈಮ್ಸ್ ಆಫ್ ಇಂಡಿಯಾ ದಿನಪತ್ರಿಕೆ | 21.04.2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ:30.05.2012ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ.1,96,27,030/– |
|---|---|---|
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಜಯಶೀಲ ನಾರಾಯಣ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು | 2,35,77,209/– | 20.13 ಹೆಚ್ಚು |
| ರಘುರಾಮ ವೆಂಕ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು | 2,68,05,173/– | 36.57 ಹೆಚ್ಚು |

ಮೇಲ್ಕಂಡಂತೆ ಶ್ರೀ ಜಯಶೀಲ ನಾರಾಯಣ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 20.13ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,96,27,030/–ಗಳ ಮೇಲೆ ಶೇಕಡಾ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 2,21,78,544/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 84 ಅಪಿಬಂ (ತಾಂತ್ರಿಕ) 2012 ಬೆಂಗಳೂರು, ದಿನಾಂಕ: 11ನೇ ಜುಲೈ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಸಿದ್ನಾಳ ಗ್ರಾಮದ ಹತ್ತಿರ ವೇದಗಂಗಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,96,27,030/–ಗಳ ಮೇಲೆ ಶೇಕಡಾ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 2,21,78,544/–ಗಳಿಗೆ (ರೂ. ಎರಡು ಕೋಟಿ ಇಪ್ಪತ್ತೊಂದು ಲಕ್ಷ ಎಪ್ಪತ್ತೆಂಟು ಸಾವಿರದ ಐನೂರ ನಲವತ್ತನಾಲ್ಕು ಮಾತ್ರ)ಗಳಿಗೆ ಶ್ರೀ ಜಯಶೀಲ ನಾರಾಯಣ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಪಿ.ಆರ್. 2068**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೀದರ್ ಜಿಲ್ಲೆ ಔರಾದ್ ತಾಲ್ಲೂಕಿನ ತೋರಣವಾಡಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋಧಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಸನೀಇ 12 ಮಸಾವಿ 2011(15) ತಾಂತ್ರಿಕ ದಿನಾಂಕ:13.06.2011

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವಲಯ,ಬಿಜೆಪಿ/ಎಇ–6/2012–13/3353/ ದಿನಾಂಕ:11.06.2012

**ಪ್ರಸ್ತಾವನೆ:**

ಬೀದರ್ ಜಿಲ್ಲೆ ಔರಾದ್ ತಾಲ್ಲೂಕಿನ ತೋರಣವಾಡಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ.195.00ಲಕ್ಷಗಳ ಅಂದಾಜಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋಧನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೀದರ್ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 26.03.2012 |
| ಜಿಲ್ಲಾಟೆಂಡರ್ ಬುಲೆಟಿನ್ | 24.03.2012 |
| ಕನ್ನಡ ಪ್ರಭ/ವಿಜಯ ಕರ್ನಾಟಕ ದಿನ ಪತ್ರಿಕೆ | 29.03.2012 |
| ಡೆಕ್ಕನ್ ಹೆರಾಲ್ಡ್ ದಿನ ಪತ್ರಿಕೆ | 29.03.2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತಾಂತ್ರಿಕ ಬಿಡ್‌ಅನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 11.05.2012ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.1,43,11,135/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.1,43,08,044/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಶಂಕರ ಕೊಟ್ಟರ್ಕಿ, ಒಂದನೇ ದರ್ಜೆ ಗುತ್ತಿಗೆದಾರರು | 1,65,83,083/– | 15.87 ಹೆಚ್ಚು | 15.90 ಹೆಚ್ಚು |
| ಗುರುನಾಥ ಕೊಳ್ಳೂರ, ಒಂದನೇ ದರ್ಜೆ ಗುತ್ತಿಗೆದಾರರು | 1,71,69,828/– | 19.97 ಹೆಚ್ಚು | 20.00 ಹೆಚ್ಚು |

ಮೇಲ್ಕಂಡಂತೆ ಶ್ರೀ ಶಂಕರ ಕೊಟ್ಟರ್ಕಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 15.90ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,43,08,044/– ಗಳ ಮೇಲೆ ಶೇಕಡಾ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,61,68,090/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 80 ಅಪಿಬಂ(ತಾಂತ್ರಿಕ) 2012 ಬೆಂಗಳೂರು, ದಿನಾಂಕ: 11ನೇ ಜುಲೈ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ ಔರಾದ್ ತಾಲ್ಲೂಕಿನ ತೋರಣವಾಡಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,43,08,044/– ಗಳ ಮೇಲೆ ಶೇಕಡಾ 13.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,61,68,090/–ಗಳಿಗೆ (ರೂ. ಒಂದು ಕೋಟಿ ಅರವತ್ತೊಂದು ಲಕ್ಷ ಅರವತ್ತೆಂಟು ಸಾವಿರದ ತೊಂಭತ್ತು ಮಾತ್ರ)ಗಳಿಗೆ ಶ್ರೀ ಶಂಕರ ಕೊಟ್ಟರ್ಕಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಪಿ.ಆರ್. 2062**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಯಾದಗಿರಿ ಜಿಲ್ಲೆ ಹಾಗೂ ತಾಲ್ಲೂಕಿನ (1) ಬಂದಳ್ಳಿ ಗ್ರಾಮದ ಅರುಣ ಕುಮಾರ ತಂದೆ ಶರಣಪ್ಪಾ ಸರ್ವೆ. ನಂ. 28 (2) ವಡಗೇರಾ ಗ್ರಾಮದ ಮಲ್ಲಪ್ಪ ತಂದೆ ಮಲ್ಲಯ್ಯ ಘಂಟೆ ಸರ್ವೆ ನಂ. 185 (3) ವರ್ಕನಳ್ಳಿ ಗ್ರಾಮದ ಶರಣಪ್ಪಾ ತಂದೆ ಕರೆಪ್ಪಾ ಸರ್ವೆ ನಂ. 65 ಹಾಗೂ ಇತರರ ಜಮೀನುಗಳಿಗೆ ಕೊಳವೆ ಬಾವಿ ಮೂಲಕ ಏತ ನೀರಾವರಿ ಯೋಜನೆ ಸೌಲಭ್ಯ ಒದಗಿಸುವ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–5/2012–13/2925/ದಿನಾಂಕ:21.05.2012.

**ಪ್ರಸ್ತಾವನೆ:**

2011–12ನೇ ಸಾಲಿನ ವಿಶೇಷ ಘಟಕ ಯೋಜನೆಯಡಿ ಮಂಜೂರಾಗಿರುವ ಯಾದಗಿರಿ ಜಿಲ್ಲೆ ಹಾಗೂ ತಾಲ್ಲೂಕಿನ (1) ಬಂದಳ್ಳಿ ಗ್ರಾಮದ ಅರುಣ ಕುಮಾರ ತಂದೆ ಶರಣಪ್ಪಾ ಸರ್ವೆ. ನಂ. 28 (2) ವಡಗೇರಾ ಗ್ರಾಮದ ಮಲ್ಲಪ್ಪ ತಂದೆ ಮಲ್ಲಯ್ಯ ಘಂಟೆ ಸರ್ವೆ ನಂ. 185 (3) ವರ್ಕನಳ್ಳಿ ಗ್ರಾಮದ ಶರಣಪ್ಪಾ ತಂದೆ ಕರೆಪ್ಪಾ ಸರ್ವೆ ನಂ. 65 ಹಾಗೂ ಇತರರ ಜಮೀನುಗಳಿಗೆ ಕೊಳವೆ ಬಾವಿ ಮೂಲಕ ಏತ ನೀರಾವರಿ ಯೋಜನೆ ಸೌಲಭ್ಯ ಒದಗಿಸುವ 03 ಕಾಮಗಾರಿಗಳ ಒಟ್ಟು ರೂ.15.00ಲಕ್ಷಗಳ ಮೊತ್ತದ ಅಂದಾಜು ಪಟ್ಟಿಗಳಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಗುಲ್ಬರ್ಗಾ ಇವರ ಮಂಜೂರಾತಿ ಸಂಖ್ಯೆ 15/11–2012, 17/11–2012 ಮತ್ತು 125/2010–11ರಲ್ಲಿ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಪ್ಯಾಕೇಜ್ ಆಧಾರದ ಮೇಲೆ ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 03.03.2012 |
| ವಿಜಯ ಕರ್ನಾಟಕ ದಿನ ಪತ್ರಿಕೆ | 06.03.2012 |
| ಉದಯ ವಾಣಿ ದಿನ ಪತ್ರಿಕೆ | 06.03.2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ದಿನಾಂಕ: 17.03.2012ರಂದು ಟೆಂಡರನ್ನು ತೆರೆದು ಪರಿಶೀಲಿಸಲಾಗಿದ್ದು ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು ಇವರು ಅರ್ಹತೆ ಹೊಂದಿರುತ್ತಾರೆ. ವಿವರಗಳು ಕೆಳಕಂಡಂತಿವೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.13,38,673/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.13,39,861/– |
| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| ಗೋವರ್ಧನ ರೆಡ್ಡಿ, ಒಂದನೇ ದರ್ಜೆ ಗುತ್ತಿಗೆದಾರರು | 14,88,947/– | 11.23 ಹೆಚ್ಚು | 11.13 ಹೆಚ್ಚು |

ಮೇಲ್ಕಂಡಂತೆ ಶ್ರೀ ಗೋವರ್ಧನ ರೆಡ್ಡಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 11.13ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.13,39,861/–ಗಳ ಮೇಲೆ ಶೇಕಡಾ 11.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 14,87,246/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 49 ಏನೀಯೋ(ತಾಂತ್ರಿಕ) 2012 ಬೆಂಗಳೂರು, ದಿನಾಂಕ: 11ನೇ ಜುಲೈ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಯಾದಗಿರಿ ಜಿಲ್ಲೆ ಹಾಗೂ ತಾಲ್ಲೂಕಿನ (1) ಬಂದಳ್ಳಿ ಗ್ರಾಮದ ಅರುಣ ಕುಮಾರ ತಂದೆ ಶರಣಪ್ಪಾ ಸರ್ವೆ. ನಂ. 28 (2) ವಡಗೇರಾ ಗ್ರಾಮದ ಮಲ್ಲಪ್ಪ ತಂದೆ ಮಲ್ಲಯ್ಯ ಘಂಟೆ ಸರ್ವೆ ನಂ. 185 (3) ವರ್ಕನಳ್ಳಿ ಗ್ರಾಮದ ಶರಣಪ್ಪಾ ತಂದೆ ಕರೆಪ್ಪಾ ಸರ್ವೆ ನಂ. 65 ಹಾಗೂ ಇತರರ ಜಮೀನುಗಳಿಗೆ ಕೊಳವೆ ಬಾವಿ ಮೂಲಕ ಏತ ನೀರಾವರಿ ಯೋಜನೆ ಸೌಲಭ್ಯ ಒದಗಿಸುವ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.13,39,861/–ಗಳ ಮೇಲೆ

ಶೇಕಡಾ 11.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 14,87,246/–ಗಳಿಗೆ (ರೂ. ಹದಿನಾಲ್ಕು ಲಕ್ಷ ಎಂಬತ್ತೇಳು ಸಾವಿರದ ಇನ್ನೂರ ನಲವತ್ತಾರು ಮಾತ್ರ)ಗಳಿಗೆ ಶ್ರೀ ಗೋವರ್ಧನ ರೆಡ್ಡಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20.01.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಪಿ.ಆರ್. 2061**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಮುಳಸಾವಳಗಿ ಇಂಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಭೂಸ್ವಾಪ್ರ/2009–10/7529, ದಿನಾಂಕ 17/12/2009.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಮುಳಸಾವಳಗಿ ಇಂಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮುಳಸಾವಳಗಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.5,60,082/–ಗಳನ್ನು ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ ಓದಲಾದ ದಿನಾಂಕ 17/12/09ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದಾರೆ. ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 04/09/1997.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 27/11/2000.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬಿಜಾಪುರ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯವು ದಿನಾಂಕ 20/11/06ರಂದು ನೀಡಿದ ತೀರ್ಪಿನಲ್ಲಿ ಪ್ರತಿ ಎಕರೆ ಖುಷ್ಕಿ ಜಮೀನಿಗೆ ರೂ.48,000/–ಗಳು ಹಾಗೂ ನೀರಾವರಿ ಜಮೀನಿಗೆ ರೂ.32,000/–ಗಳನ್ನು ನಿಗದಿಪಡಿಸಿ ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಮುಳಸಾವಳಗಿ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 143/01 | 290/1ಸಿ | 2–20 | 147936 |
| 2 | 144/01 | 285/3ಬಿ | 2–26 | 292755 |
| 3 | 145/01 | 290/4 | 0–03 | 70636 |
| | **ಒಟ್ಟು** | | | **511327** |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 41 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 14ನೇ ಆಗಸ್ಟ್ 2012.**

ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಮುಳಸಾವಳಗಿ ಗ್ರಾಮದ ಇಂಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮುಳಸಾವಳಗಿ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.5,11,327–00 ಗಳನ್ನು (ಐದು ಲಕ್ಷದ ಹನ್ನೊಂದು ಸಾವಿರದ ಮುನ್ನೂರ ಇಪ್ಪತ್ತೇಳು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಮರುಹೊಂದಾಣಿಕೆ ಅನುದಾನದಿಂದ ರೂ.5,11,327/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಪಿ.ಆರ್. 2069**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ ಪುರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 01/02/12ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ಭೂಸ್ವಾಪ್ರ/2011–12/543.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪುರ ಮತ್ತು ಉದ್ಯಾಳ ಗ್ರಾಮಗಳ ಜಮೀನುಗಳಿಗೆ ಕೊಪ್ಪಳದ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿದ್ದಾರೆ. ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ಹೊರಡಿಸಿದ ದಿನಾಂಕ 14/02/2002.
- ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ 29/07/2005

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸಿವಿಲ್ ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣಗಳನ್ನು ದಾಖಲಿಸಿದ್ದು, ಎಲ್.ಎ.ಸಿ. 12/07ರಲ್ಲಿ ಗಂಗಾವತಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ದಿನಾಂಕ 06/12/08ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆಗೆ ರೂ.1,09,167/–ಗಳನ್ನು ಹಾಗೂ ಕುಷ್ಟಗಿ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. 25/07 ಮತ್ತು 29/07ರಲ್ಲಿ ಸಿವಿಲ್ ನ್ಯಾಯಾಲಯವು ದಿನಾಂಕ 23/02/08ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆಗೆ ರೂ.1,05,500/–ಗಳನ್ನು ನಿಗದಿಪಡಿಸಿ ಆದೇಶಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆ ಕಾನೂನು ಕೋಶವು ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಬಾಕಿ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಸ.ನಂ. | ಗ್ರಾಮ | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 12/07 | 69/ಅಬಕ | ಉದ್ಯಾಳ | 0–20 | 194670 |
| 2 | 25/07 | 80/ಅ | ಪುರ | 0–13 | 123382 |
| 3 | 29/07 | 80/ಡ | ಪುರ | 0–12 | 113929 |
| | ಒಟ್ಟು | | | | **431981** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 33 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ 14ನೇ ಆಗಸ್ಟ್ 2012.**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಪುರ ಮತ್ತು ಉದ್ಯಾಳ ಗ್ರಾಮಗಳಿಗೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.4,31,981/–ಗಳನ್ನು (ನಾಲ್ಕು ಲಕ್ಷದ ಮೂವತ್ತೊಂದು ಸಾವಿರದ ಒಂಭೈನೂರ ಎಂಭತ್ತೊಂದು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.4,31,981/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಪಿ.ಆರ್. 2070**

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಇ.ಬಾಲಕೃಷ್ಣ, ಹಿಂದಿನ ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಹೊಸದುರ್ಗ ಮತ್ತು ಶ್ರೀ ಎಸ್.ಜಿ.ಪ್ರಸನ್ನ, ದ್ವಿತೀಯ ದರ್ಜೆ ಸಹಾಯಕ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಕುರಿತು ಆದೇಶ

**ಓದಲಾಗಿದೆ:** 1) ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ:ಸಿಸಿಎ:ಸಿಆರ್/18/2010–11, ದಿನಾಂಕ:15.10.2010

2) ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 67 ಎಡಿಇ 2010, ದಿನಾಂಕ: 10.01.2011

3) ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 67 ಎಡಿಇ 2010, ದಿನಾಂಕ: 25.08.2011

4) ಕಾರಣ ಕೇಳುವ ನೋಟೀಸ್ ಸಂಖ್ಯೆ:ಆರ್‌ಡಿ 67 ಎಡಿಇ 2010, ದಿನಾಂಕ:11.05.2012

5) ಶ್ರೀ ಇ.ಬಾಲಕೃಷ್ಣ, ತಹಶೀಲ್ದಾರ್, ಹೊಸದುರ್ಗ ತಾಲ್ಲೂಕು ಇವರ ಲಿಖಿತ ಹೇಳಿಕೆ ದಿನಾಂಕ:18.06.2012

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ:15-10-2010ರ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ರವರ ಪತ್ರದಲ್ಲಿ ಶ್ರೀ ಎಸ್.ಜಿ. ಪ್ರಸನ್ನ, ದ್ವಿ.ದ.ಸ, ಪರಶುರಾಂಪುರ ನಾಡಕಛೇರಿ, ನಿಯೋಜನೆ ಮೇರೆಗೆ ತಾಲ್ಲೂಕು ಕಛೇರಿ, ಚಳ್ಳಕೆರೆ ರವರಿಗೆ ಚಳ್ಳಕೆರೆ ತಾಲ್ಲೂಕಿನಲ್ಲಿರುವ ನವ ಕಾನೂನು ಪದವೀಧರರಿಗೆ ಪ್ರೋತ್ಸಾಹ ಧನ ನೀಡುವ ಶಾಖೆಯನ್ನು ವಹಿಸಲಾಗಿದ್ದು, ಸದರಿ ನೌಕರರು ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು ರವರಿಗೆ ಬಿಡುಗಡೆ ಮಾಡಲಾಗಿದ್ದ ಅನುದಾನದಲ್ಲಿ ಕಾನೂನು ಪದವೀಧರರಿಗೆ ಚೆಕ್ ನೀಡುವ ಬಗ್ಗೆ ತಹಶೀಲ್ದಾರರಿಂದ ಚೆಕ್ಕುಗಳಿಗೆ ಸಹಿ ಪಡೆಯಲಾಗಿದ್ದು, ಅವುಗಳನ್ನು ಸಂಬಂಧಿಸಿದವರಿಗೆ ನೀಡದಿರುವ ವಿಚಾರದಲ್ಲಿ ಸಂಬಂಧಪಟ್ಟ ಬ್ಯಾಂಕಿನಿಂದ ಬ್ಯಾಲೆನ್ಸ್ ಶೀಟ್, ಚೆಕ್ಕುಗಳ ವಿವರಗಳನ್ನು ಪಡೆದು, ಜಿಲ್ಲಾಧಿಕಾರಿಗಳು ಪರಿಶೀಲಿಸಲಾಗಿರುವುದಾಗಿ ದಿನಾಂಕ: 10-08-2009 ರಿಂದ 18-01-2010 ರವರೆಗೆ ವಿವಿಧ ಮೊತ್ತಗಳ ಒಟ್ಟು 29 ಚೆಕ್‌ಗಳನ್ನು ಒಟ್ಟು ಮೊತ್ತ ರೂ. 29,000/- ಕ್ಕೆ ಬರೆದಿದ್ದು, ನಂತರ ನಾಲ್ಕು ಚೆಕ್ಕುಗಳಲ್ಲಿನ ಮೊತ್ತವನ್ನು ತಿದ್ದಿ, ರೂ. 60,000/- ಗಳ ಹೆಚ್ಚಿಗೆ ಹಣವನ್ನು ಬ್ಯಾಂಕಿನಿಂದ ಡ್ರಾ ಮಾಡಿರುವುದರ ಜೊತೆಗೆ 14 ಚೆಕ್ಕುಗಳನ್ನು ಫಲಾನುಭವಿಗಳ ಫೋರ್ಜರಿ ಸಹಿ ಮಾಡಿ ಒಟ್ಟು ರೂ. 1,01,000/- ಮೊಬಲಗಿನ ಸರ್ಕಾರದ ಹಣವನ್ನು ದುರುಪಯೋಗ ಮಾಡಿರುವ ಹಿನ್ನೆಲೆಯಲ್ಲಿ ಈ ನೌಕರರ ವಿರುದ್ಧ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲಿಸಿ, ನ್ಯಾಯಾಂಗ ಬಂಧನದಲ್ಲಿಟ್ಟಿರುವ ಕಾರಣ ದಿನಾಂಕ; 23-06-2010 ರಿಂದ ಅನ್ವಯವಾಗುವಂತೆ ನೌಕರರನ್ನು ನಿಲಂಬನೆಯಲ್ಲಿ ಇಟ್ಟಿರುವುದಾಗಿ ಜಿಲ್ಲಾಧಿಕಾರಿಗಳು ವರದಿ ನೀಡಿರುತ್ತಾರೆಂದು ತಿಳಿಸಿರುತ್ತಾರೆ.

ಅಲ್ಲದೆ ಜಿಲ್ಲಾಧಿಕಾರಿಗಳು ಈ ವಿಚಾರದಲ್ಲಿ ಶ್ರೀ ಇ. ಬಾಲಕೃಷ್ಣಪ್ಪ, ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು, ಇವರಿಗೆ ಕಾರಣ ಕೇಳಿ ನೋಟೀಸ್ ನೀಡಿ ಅವರ ವಿವರಣೆ ಪಡೆದಿರುವುದಾಗಿ, ಸದರಿ ವಿವರಣೆಯಲ್ಲಿ ಶ್ರೀ ಇ. ಬಾಲಕೃಷ್ಣಪ್ಪ, ತಹಶೀಲ್ದಾರ್‌ರವರು ಬೇಜವಾಬ್ದಾರಿಯುತ ಹಾರಿಕೆ ಉತ್ತರವನ್ನು ಸಲ್ಲಿಸಿರುವುದಾಗಿ, ನೌಕರರ ಮೇಲೆ ನಂಬಿಕೆಯಿಂದ ಚೆಕ್‌ಗಳಿಗೆ ಸಹಿ ಮಾಡಿರುವುದಾಗಿ ತಮ್ಮ ಕಾರ್ಯ ಒತ್ತಡದಿಂದ ನೌಕರನ ತಪ್ಪನ್ನು ಗಮನಿಸಲಾಗಿರುವುದಿಲ್ಲವೆಂದು ನೀಡಿರುವ ವಿವರಣೆ ಸಮಂಜಸವಲ್ಲವೆಂದು ಜಿಲ್ಲಾಧಿಕಾರಿಗಳು ತಮ್ಮ ಪತ್ರದಲ್ಲಿ ತಿಳಿಸುತ್ತಾ, ಶ್ರೀ ಇ. ಬಾಲಕೃಷ್ಣಪ್ಪ, ತಹಶೀಲ್ದಾರ್‌ರವರು ಕೆಲವೊಂದು ಗುರುತರವಾದ ಕರ್ತವ್ಯ ಲೋಪ ಎಸಗಿರುವುದಾಗಿ ತಿಳಿಸಿರುತ್ತಾರೆ.

ಜಿಲ್ಲಾಧಿಕಾರಿಗಳು ಸದರಿ ಪತ್ರದಲ್ಲಿ ತಿಳಿಸಿರುವಂತೆ ತಹಶೀಲ್ದಾರ್ ರವರು ಪ್ರಮುಖವಾದ ಈ ಶಾಖೆಯನ್ನು ಶ್ರೀ ಎಸ್.ಜಿ. ಪ್ರಸನ್ನ, ದ್ವಿ.ದ.ಸ ರವರಿಗೆ ನಿರ್ವಹಿಸಲು ನೀಡಿದ್ದು, ಸದರಿ ನೌಕರರು ಅವರ ದುಷ್ಕೃತ್ಯಗಳಿಂದಾಗಿ ಈ ಹಿಂದೆ ಅಮಾನತ್ತುಗೊಂಡು ಇಲಾಖಾ ವಿಚಾರಣೆ ಎದುರಿಸುತ್ತಿರುವವರಾಗಿದ್ದು, ಇಂತಹವರಿಗೆ ಹಣಕಾಸು ವ್ಯವಹಾರದ ಜವಾಬ್ದಾರಿಯನ್ನು ತಹಶೀಲ್ದಾರ್‌ರವರು ವಹಿಸಿರುವುದು, ಪ್ರೋತ್ಸಾಹಧನ ಪಾವತಿಸಲು ಚೆಕ್ ಬರೆಯುವ ಮುನ್ನ ಮಂಜೂರಾತಿಯನ್ನು ಕಡತದಲ್ಲಿ ಮಾಡದೇ ಇರುವುದು ಹಾಗೂ ಈ ಬಗ್ಗೆ ಕಡತ ನಿರ್ವಹಿಸದೇ ಇರುವುದು, ಸಂಬಂಧಿಸಿದ ಶಿರಸ್ತೇದಾರ್‌ರವರ ಗಮನಕ್ಕೆ ತರದೆ ವಿಷಯ ನಿರ್ವಾಹಕರು ಚೆಕ್ ಬರೆದು ನೇರವಾಗಿ ತಹಶೀಲ್ದಾರ್ ರವರ ಸಹಿ ಮಾಡಿಸುತ್ತಿರುವ ಬಗ್ಗೆ, ಪ್ರೋತ್ಸಾಹ ಧನ ನೀಡುವ ಚೆಕ್‌ಗಳನ್ನು ಅಕೌಂಟ್ ಪೇಯಿ ಅಥವಾ ಕ್ರಾಸ್ ಮಾಡದೆ ಚೆಕ್ ಸಹಿ ಮಾಡಿರುವ ಬಗ್ಗೆ, ಚೆಕ್‌ಗೆ ಸಹಿ ಮಾಡುವ ಮುನ್ನ ಚೆಕ್‌ನಲ್ಲಿ ಅಂಕಿ ಹಾಗೂ ಪದಗಳಲ್ಲಿ ನಮೂದಿಸಿರುವ ಮೊತ್ತ ತಿದ್ದಲು ಆಸ್ಪದ ಇಲ್ಲದಂತೆ ಬರೆದಿರುವುದನ್ನು ಪರಿಶೀಲಿಸದೆ ಸಹಿ ಮಾಡಿರುವುದು, ಚೆಕ್‌ಗಳನ್ನು ಫಲಾನುಭವಿಗಳಿಗೆ ನೀಡಿದ ಬಗ್ಗೆ ದಾಖಲೆ ಪಡೆಯದಿರುವುದು, ಅನುದಾನ ಬಿಡುಗಡೆ ಮತ್ತು ಖರ್ಚು ಮಾಡಿದ ಬಗ್ಗೆ ನಗದು ವಹಿ ನಿರ್ವಹಿಸದೇ ಇರುವ ಮುಂತಾದ ಆರೋಪಗಳನ್ನು ಶ್ರೀ ಇ. ಬಾಲಕೃಷ್ಣಪ್ಪ, ತಹಶೀಲ್ದಾರ್ ರವರ ವಿರುದ್ಧ ಮಾಡಿದ್ದು, ತಹಶೀಲ್ದಾರ್‌ರವರು ಈ ಎಲ್ಲಾ ನ್ಯೂನತೆಗಳಿಗೆ ಗಮನಹರಿಸದೆ ಕರ್ತವ್ಯ ಚ್ಯುತಿ ಎಸಗಿ, ರೂ. 1,01,000/- ಗಳ ಸರ್ಕಾರಿ ಹಣ ದುರುಪಯೋಗಕ್ಕೆ ಕಾರಣರಾಗಿರುವುದರಿಂದ ಅವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಕೋರಿರುತ್ತಾರೆ.

ತಹಶೀಲ್ದಾರರು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ಹಣಕಾಸು ನಿರ್ವಹಣೆಯ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸದೆ ಹಣಕಾಸಿನ ವ್ಯವಹಾರದಲ್ಲಿ ಅಗತ್ಯ ಹಾಗೂ ಅವಶ್ಯ ದಾಖಲೆಗಳನ್ನು ನಿರ್ವಹಿಸದೆ ರೂ. 1,01,000/- ಗಳ ಸರ್ಕಾರಿ ಹಣ ದುರುಪಯೋಗಕ್ಕೆ ಕಾರಣವಾಗಿ ಕರ್ತವ್ಯ ಲೋಪ ಎಸಗಿರುವುದು ಮೇಲ್ನೋಟಕ್ಕೆ ಕಂಡುಬರುವುದರಿಂದ ಜಿಲ್ಲಾಧಿಕಾರಿಗಳ ವರದಿ ಪರಿಗಣಿಸಿ, ಶ್ರೀ ಇ. ಬಾಲಕೃಷ್ಣಪ್ಪ, ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು ರವರನ್ನು ಇಲಾಖಾ ವಿಚಾರಣೆಗೆ ಒಳಪಡಿಸಿ, ಸೇವೆಯಿಂದ ಅಮಾನತ್ತು ಗೊಳಿಸುವ ಬಗ್ಗೆ ಪ್ರಾದೇಶಿಕ ಆಯುಕ್ತರು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು, ಹಾಗೂ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ, ಇವರುಗಳ ವರದಿಯನ್ನು ಪರಿಶೀಲಿಸಿ, ಶ್ರೀ ಇ. ಬಾಲಕೃಷ್ಣಪ್ಪ, ಹಿಂದಿನ ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಹೊಸದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಇವರು ಕರ್ನಾಟಕ ನಾಗರೀಕ ಸೇವಾ (ನಡವಳಿ) ನಿಯಮಗಳು 1966ರ ನಿಯಮ 3ನ್ನು ಉಲ್ಲಂಘಿಸಿ ಕರ್ತವ್ಯ ಲೋಪ ವೆಸಗಿರುವುದು ಸ್ಪಷ್ಟವಾಗಿ ಕಂಡುಬಂದಿರುವುದರಿಂದ ಮೇಲೆ ಓದಲಾದ ಕ್ರ.ಸಂ.(2) ರ ಸರ್ಕಾರಿ ಆದೇಶದನ್ವಯ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ.

ಇವರನ್ನು ಅಮಾನತ್ತುಗೊಳಿಸಿ 6 ತಿಂಗಳು ಗತಿಸಿದ್ದರಿಂದ, ಈ ಬಗ್ಗೆ ಪರಿಶೀಲಿಸಿ ಮೇಲೆ ಓದಲಾದ ಕ್ರ.ಸಂ.(3) ರ ದಿನಾಂಕ:25.08.2011 ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತನ್ನು ತೆರವುಗೊಳಿಸಿ ಶ್ರೀಯುತರನ್ನು ಸ್ಥಳ ನಿಯುಕ್ತಿಗೊಳಿಸಿ ಕರ್ತವ್ಯಕ್ಕೆ ಪುನರ್ ನೇಮಕ ಮಾಡಲಾಗಿದೆ.

ತದನಂತರ, ಕಾರಣ ಕೇಳುವ ನೋಟೀಸನ್ನು ಮೇಲೆ ಓದಲಾದ ಕ್ರ.ಸಂ.(4) ರಲ್ಲಿ ಶ್ರೀ ಇ.ಬಾಲಕೃಷ್ಣಪ್ಪ, ಹಿಂದಿನ ತಹಶೀಲ್ದಾರ್, ಚಳ್ಳಕೆರೆ ಹಾಗೂ ಶ್ರೀ ಎಸ್.ಜಿ.ಪ್ರಸನ್ನ, ದ್ವಿತೀಯ ದರ್ಜೆ ಸಹಾಯಕ ಇವರಿಗೆ 1 ರಿಂದ 4 ರವರೆಗಿನ ಅನುಬಂಧದ ಆರೋಪ ಟಿಪ್ಪಣಿಯೊಂದಿಗೆ ನೀಡಲಾಗಿರುತ್ತದೆ.

ಸದರಿ ಕಾರಣ ಕೇಳುವ ನೋಟೀಸಿಗೆ ನೀಡಿರುವ ಮೇಲೆ ಓದಲಾದ ಕ್ರ.ಸಂ.(5) ರ ಪತ್ರದಲ್ಲಿ ಶ್ರೀಯುತ ಇ.ಬಾಲಕೃಷ್ಣಪ್ಪ, ತಹಶೀಲ್ದಾರ್ ಇವರು ಅವರ ವಿರುದ್ದ ಆರೋಪಿಸಲಾದ ಆರೋಪಗಳನ್ನು ಒಪ್ಪಿಕೊಳ್ಳದೇ ಅಲ್ಲಗೆಳೆದಿರುತ್ತಾರೆ. ಆದರೆ, ಮತ್ತೊಬ್ಬ ಆರೋಪಿಯಾದ ಶ್ರೀ ಎಸ್.ಜಿ.ಪ್ರಸನ್ನ, ದ್ವಿತೀಯ ದರ್ಜೆ ಸಹಾಯಕ ಇವರು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಆದುದರಿಂದ ಪ್ರಕರಣದಲ್ಲಿನ ಸತ್ಯಾ ಸತ್ಯತೆಯನ್ನು ತಿಳಿದುಕೊಂಡು ನಿರ್ಣಯ ತೆಗೆದುಕೊಳ್ಳುವ ಸಲುವಾಗಿ ಸದರಿ ಅಧಿಕಾರಿ ಶ್ರೀ ಇ.ಬಾಲಕೃಷ್ಣಪ್ಪ ಮತ್ತು ಶ್ರೀ ಎಸ್.ಜಿ.ಪ್ರಸನ್ನ, ದ್ವಿತೀಯ ದರ್ಜೆ ಸಹಾಯಕ ಇವರ ವಿರುದ್ದ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ನಿವೃತ್ತ ನ್ಯಾಯಾಧೀಶರಾದ ಶ್ರೀ ಎಸ್.ವೈ.ಕುಂಬಾರ್ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಚಳ್ಳಕೆರೆ ತಹಶೀಲ್ದಾರ್ ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ನಿರ್ಣಯಿಸಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 67 ಎಡಿಇ 2010, ಬೆಂಗಳೂರು, ದಿನಾಂಕ:24.07.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರ ಜೊತೆ 13ರನ್ನೊಳಗೊಂಡಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಇ.ಬಾಲಕೃಷ್ಣಪ್ಪ, ಹಿಂದಿನ ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಹೊಸದುರ್ಗ ಮತ್ತು ಶ್ರೀ ಎಸ್.ಜಿ.ಪ್ರಸನ್ನ, ದ್ವಿತೀಯ ದರ್ಜೆ ಸಹಾಯಕ ಅವರುಗಳ ವಿರುದ್ದ ಜಂಟಿ ಇಲಾಖಾ ವಿಚಾರಣೆ ನಡೆಸಲು ಹಾಗೂ ಮೇಲ್ಕಾಣಿಸಿದ ನಿಯಮಗಳ ನಿಯಮ 11(5) ರನ್ವಯ ಶ್ರೀ ಎಸ್.ವೈ.ಕುಂಬಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.394, 18ನೇ ಮುಖ್ಯರಸ್ತೆ, 6ನೇ ಬ್ಲಾಕ್, ಕೋರಮಂಗಲ, ಬೆಂಗಳೂರು–95 ಅವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಅದೇ ನಿಯಮಗಳ ನಿಯಮ 11(5)(ಸಿ) ರನ್ವಯ ತಹಶೀಲ್ದಾರ್, ಚಳ್ಳಕೆರೆ ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು, ಈ ಪ್ರಕರಣದ ವಿಚಾರಣೆಯನ್ನು ಜಿಲ್ಲಾಧಿಕಾರಿ, ಚಿತ್ರದುರ್ಗ ಅವರ ಕಛೇರಿ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗಧಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಾಗ್ರಿಗಳನ್ನು ಜಿಲ್ಲಾಧಿಕಾರಿ, ಚಿತ್ರದುರ್ಗ ಅವರು ಒದಗಿಸತಕ್ಕದ್ದು.

ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 06 ಸೇಇವಿ 2010, ದಿನಾಂಕ:28.04.2011 ರನ್ವಯ ನೀಡಬೇಕಾದ ಸಂಭಾವನೆಯನ್ನು ಜಿಲ್ಲಾಧಿಕಾರಿ, ಚಿತ್ರದುರ್ಗ ಅವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11ಮತ್ತು 13 ರಲ್ಲಿನ ವಿಧಿ ವಿಧಾನವನ್ನು ಅನುಸರಿಸಿ, ಇಲಾಖಾ ವಿಚಾರಣಾ ವರದಿಯನ್ನು 2 ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ.ರಾಮಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 1989**

## ಕಂದಾಯ ಸಚಿವಾಲಯ

**ವಿಷಯ:** ಡಾ: ಎಸ್.ಎಸ್. ಮಧುಕೇಶ್ವರ, ಹಿಂದಿನ ತಹಶೀಲ್ದಾರ್, ರಾಯಚೂರು, ಪ್ರಸ್ತುತ ತಹಶೀಲ್ದಾರ್, ಭಟ್ಕಳ ತಾಲ್ಲೂಕು, ಕಾರವಾರ ಜಿಲ್ಲೆ ಅವರನ್ನು ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿ, ರಾಯಚೂರು ಅವರ ಪತ್ರ ಸಂಖ್ಯೆ.ಕಂದಾಯ/ಇಎನ್‌ಪಿ/24/ 2011–12 ದಿನಾಂಕ:25.08.2011.–90

2. ಸರ್ಕಾರಿ ಪತ್ರ ಸಂಖ್ಯೆ.ಕಂಇ 67 ಎಡಿಇ 2011 ದಿನಾಂಕ: 13–12–2011.–92

3. ಜಿಲ್ಲಾಧಿಕಾರಿ, ರಾಯಚೂರು ಅವರ ಪತ್ರ ಸಂಖ್ಯೆ.ಕಂದಾಯ/ಇಎನ್‌ಪಿ/24/ 2011–12 ದಿನಾಂಕ:17.01.2012.

4. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ.ಕಂಇ 67 ಎಡಿಇ 2011 ದಿನಾಂಕ: 10/11–05–2012.

5. ಡಾ: ಎಸ್.ಎಸ್. ಮಧುಕೇಶ್ವರ, ತಹಶೀಲ್ದಾರ್, ಭಟ್ಕಳ ತಾಲ್ಲೂಕು, ಕಾರವಾರ ಜಿಲ್ಲೆ ಅವರ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ.1ರ ಪತ್ರದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಅವರು ಪೋಲೀಸ್ ಅಧೀಕ್ಷಕರು, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಗುಲ್ಬರ್ಗ ಅವರು ಸಲ್ಲಿಸಿರುವ ವರದಿಯನ್ನು ಲಗತ್ತಿಸಿ, ಡಾ:ಎಸ್.ಎಸ್. ಮಧುಕೇಶ್ವರ, ರಾಯಚೂರು ತಾಲ್ಲೂಕು ತಹಶೀಲ್ದಾರ್ ಅವರು ಶ್ರೀ ನೋಹನ್ ಎಂಬುವವರಿಗೆ ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿದ್ದು, ಅದರ ಬಗ್ಗೆ ತಕ್ಷಣವೇ ತಹಶೀಲ್ದಾರರನ್ನು ವಿಚಾರಣೆಗೊಳಪಡಿಸಿ ಈ ವಿಷಯದ ಬಗ್ಗೆ ಸೂಕ್ತ ಕ್ರಮ ಕೊಳ್ಳಲು ಕೋರಿದ್ದರ ರೀತ್ಯ, ಈ ಪ್ರಕರಣಕ್ಕೆ ಸಂಬಂದಿಸಿದಂತೆ, ಡಾ: ಎಸ್.ಎಸ್. ಮಧುಕೇಶ್ವರ, ತಹಶೀಲ್ದಾರ್, ಅವರಿಂದ ವಿವರಣೆಯನ್ನು ರಾಯಚೂರು ಜಿಲ್ಲಾಧಿಕಾರಿ ಅವರು ಕೋರಿರುವುದಾಗಿ ತಿಳಿಸಿ, ಈ ಪ್ರಕರಣದ ಕುರಿತಂತೆ ವಿವರವಾದ ವರದಿಯನ್ನು ಪ್ರತ್ಯೇಕವಾಗಿ ಸಲ್ಲಿಸಲಾಗುವುದು ಎಂದು ತಿಳಿಸಿ, ಸದರಿವಯವ ವಿರುದ್ಧ ಮುಂದಿನ ಶಿಸ್ತು ಕ್ರಮ ಜರುಗಿಸಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ.2ರ ಸರ್ಕಾರದ ಪತ್ರದಲ್ಲಿ , ಡಾ: ಎಸ್.ಎಸ್. ಮಧುಕೇಶ್ವರ, ತಹಶೀಲ್ದಾರ್, ಅವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಅವರ ಮೇಲೆ ಮಾಡಲಾಗಿರುವ ಆರೋಪಗಳನ್ನು ಸಮರ್ಥಿಸುವಂತಹ ದಾಖಲೆಗಳೊಂದಿಗೆ ಆರೋಪ ಪಟ್ಟಿ 1ರಿಂದ 4ರವರೆಗಿನ ದಸ್ತವೇಜುಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಕೋರಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ.3 ಪತ್ರದಲ್ಲಿ ಡಾ: ಎಸ್.ಎಸ್. ಮಧುಕೇಶ್ವರ, ತಹಶೀಲ್ದಾರ್, ಅವರ ವಿರುದ್ಧದ ಆರೋಪಗಳನ್ನು ಸಮರ್ಥಿಸುವಂತಹ ದಾಖಲೆಗಳೊಂದಿಗೆ ಆರೋಪ ಪಟ್ಟಿ 1ರಿಂದ 4ರವರೆಗಿನ ದಸ್ತವೇಜುಗಳೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ.4ರ ಸರ್ಕಾರದ ಕಾರಣ ಕೇಳುವ ನೋಟೀಸ್‌ನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 11ನೇ ನಿಯಮದ ಮೇರೆಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ತಿಳಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ.5ರಲ್ಲಿ ಡಾ: ಎಸ್.ಎಸ್. ಮಧುಕೇಶ್ವರ, ತಹಶೀಲ್ದಾರ್, ಭಟ್ಕಳ್ ಅವರು ತಮ್ಮ ಲಿಖಿತ ಹೇಳಿಕೆಯನ್ನು ತಮ್ಮ ಮೇಲಿನ ಆರೋಪಗಳನ್ನು ಅಲ್ಲಗೆಳೆಯುತ್ತಾ, ತಮ್ಮ ಮೇಲಿನ ಆರೋಪವನ್ನು ಕೈ ಬಿಡಲು ಕೋರಿರುತ್ತಾರೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 67 ಎಡಿಇ 2011, ಬೆಂಗಳೂರು, ದಿನಾಂಕ: 30–07–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ: ಎಸ್.ಎಸ್. ಮಧುಕೇಶ್ವರ, ಹಿಂದಿನ ತಹಶೀಲ್ದಾರ್, ರಾಯಚೂರು, ಪ್ರಸ್ತುತ ತಹಶೀಲ್ದಾರ್, ಭಟ್ಕಳ ತಾಲ್ಲೂಕು, ಕಾರವಾರ ಜಿಲ್ಲೆ ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಡಿ)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿಯವರ ವಿರುದ್ಧ ಶಿಸ್ತಿನ ಕ್ರಮವನ್ನು ಬಾಕಿ ಇಟ್ಟು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಮಾನತ್ತಿನಲ್ಲಿಟ್ಟು ಆದೇಶಿಸಲಾಗಿದೆ.

(2) ಅಮಾನತ್ತಿನ ಅವಧಿಯಲ್ಲಿ ಇವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 98ನೇ ನಿಯಮದಲ್ಲಿ ನಿಗಧಿಪಡಿಸಿರುವಂತೆ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

(3) ಅಮಾನತ್ತಿನ ಅವಧಿಯಲ್ಲಿ ಸದರಿಯವರು ಕೇಂದ್ರಸ್ಥಾನವನ್ನು ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೆ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ.ರಾಮಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 1845**

## ಕಂದಾಯ ಸಚಿವಾಲಯ

**ವಿಷಯ**: ತಹಶೀಲ್ದಾರ್ ಗ್ರೇಡ್–2 ವೃಂದದಿಂದ ಗ್ರೇಡ್–1 ವೃಂದಕ್ಕೆ ಪದೋನ್ನತಿ ನೀಡಿರುವುದಕ್ಕೆ ಕೆ.ಸಿ.ಎಸ್.ಆರ್ ನಿಯಮ 60 ರಡಿ ಫ್ರೋಫಾರ್ಮ ಬಡ್ತಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂ: ಆರ್‌ಡಿ 360 ಎಎಸ್‌ಡಿ 2011, ದಿನಾಂಕ:17–04–2012

2) ಮಹಾಲೇಖಪಾಲರು (ಎ&ಇ), ಕರ್ನಾಟಕ, ಬೆಂಗಳೂರುಇವರ ಪತ್ರ ಸಂ:GE–1/R3 199/Dated:04.05.2012

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1) ರಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 260 ಎಎಸ್‌ಡಿ 2011, ದಿನಾಂಕ:17.04.2012 ರಲ್ಲಿ ತಹಶೀಲ್ದಾರ್ ಗ್ರೇಡ್–2 ವೃಂದದಿಂದ ಗ್ರೇಡ್–1 ವೃಂದಕ್ಕೆ ಸ್ಥಾನ ಪನ್ನ ಬಡ್ತಿ ನೀಡಿ ಈ ಕೆಳಕಂಡ ತಹಶೀಲ್ದಾರರುಗಳು ಇದ್ದ ಸ್ಥಳಗಳಲ್ಲಿಯೇ ಮುಂದುವರೆಸಿ ಆದೇಶಿಸಲಾಗಿತ್ತು.

| ಕ್ರ.ಸಂ | ತಹಶೀಲ್ದಾರರ ಹೆಸರು | ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ |
|---|---|---|
| 1 | ಎಸ್.ಕೆ.ರೇಣುಕಾ, ತಹಶೀಲ್ದಾರ್ | ವಿಶೇಷ ತಹಶೀಲ್ದಾರ್, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು. |
| 2 | ಕೆ.ಪಿ.ಕೃಷ್ಣ, ತಹಶೀಲ್ದಾರ್ | ಅಡ್ಮಿನ್ ಆಫೀಸರ್, ಆರ್ಟಿಕಲ್ಚರ್ ಯೂನಿವರ್ಸಿಟಿ, ಬಾಗಲಕೋಟೆ |
| 3 | ಎಂ.ಎಂ.ಮುಲ್ಲಾ | ಗೆಜೆಟೆಡ್ ಮ್ಯಾನೇಜರ್, ಮಲಪ್ರಭಾ ಗಟಪ್ರಭಾ ಯೋಜನೆ, ಕಾಡಾ, ಬೆಳಗಾಂ |
| 4 | ಬಷೀರ್ ಅಹ್ಮದ್ ಎ.ಎನ್ | ತಹಶೀಲ್ದಾರ್, ಬೆಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು |
| 5 | ಶೇಕ್ ಖಲೀಮುಲ್ಲಾ | ವಿಶೇಷ ತಹಶೀಲ್ದಾರ್, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ, ಬೆಂಗಳೂರು |
| 6 | ವಿ.ಪ್ರಿಯದರ್ಶಿನಿ | ವಿಶೇಷ ತಹಶೀಲ್ದಾರ್, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ, ಮೈಸೂರು |
| 7 | ವಿ.ಹನುಮಂತರಾಯಪ್ಪ | ತಹಶೀಲ್ದಾರ್, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು. |

ಮೇಲೆ ಓದಲಾದ ಕ್ರ.ಸಂ.(2) ರಲ್ಲಿ ಮೇಲ್ಕಂಡ ತಹಶೀಲ್ದಾರ್‌ಗಳಿಗೆ ಗ್ರೇಡ್-2 ವೃಂದದಿಂದ ಗ್ರೇಡ್-1 ವೃಂದಕ್ಕೆ ಪದೋನ್ನತಿ ನೀಡಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಇವರುಗಳಿಗೆ ಕೆ.ಸಿ.ಎಸ್.ಆರ್ ನಿಯಮವಾಳಿ 1957 ನಿಯಮ 60 ರಡಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸದರಿ ಹುದ್ದೆಗಳು ಕಂದಾಯ ಇಲಾಖೆಯ ವೃಂದ ಬಾಹಿರ ಹುದ್ದೆಗಳು ಆಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 197 ಎಎಸ್‌ಡಿ 2012, ಬೆಂಗಳೂರು, ದಿನಾಂಕ:21-05-2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು ದಿನಾಂಕ:18.07.2011 ರಿಂದ ಜಾರಿಗೆ ಬರುವಂತೆ ಈ ಕೆಳಕಂಡ ತಹಶೀಲ್ದಾರ್‌ಗಳಿಗೆ ಗ್ರೇಡ್-1 ಹುದ್ದೆಗೆ ಕೆ.ಸಿ.ಎಸ್.ಆರ್. ನಿಯಮ 60ರಡಿಯಲ್ಲಿ ಪ್ರೋಫಾರ್ಮ ಬಡ್ತಿ ನೀಡಿ ಆದೇಶಿಸಿದೆ.

1. ಎಸ್.ಕೆ.ರೇಣುಕಾ, ತಹಶೀಲ್ದಾರ್
2. ಕೆ.ಪಿ.ಕೃಷ್ಣ, ತಹಶೀಲ್ದಾರ್
3. ಎಂ.ಎಂ.ಮುಲ್ಲಾ, ತಹಶೀಲ್ದಾರ್
4. ಬಷೀರ್ ಅಹ್ಮದ್ ಎ.ಎನ್, ತಹಶೀಲ್ದಾರ್
5. ಶೇಕ್ ಖಲೀಮುಲ್ಲಾ, ತಹಶೀಲ್ದಾರ್
6. ವಿ.ಪ್ರಿಯದರ್ಶಿನಿ, ವಿಶೇಷ ತಹಶೀಲ್ದಾರ್
7. ವಿ.ಹನುಮಂತರಾಯಪ್ಪ, ತಹಶೀಲ್ದಾರ್

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ.ರಾಮಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

**ಪಿ.ಆರ್. 2071**

## ಕಂದಾಯ ಸಚಿವಾಲಯ

**ಸಂಖ್ಯೆ: ಆರ್‌ಡಿ 197 ಎಎಸ್‌ಡಿ 2012 ಬೆಂಗಳೂರು, ದಿನಾಂಕ:22-05-2012.**

**ತಿದ್ದುಪಡಿ**

ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 197 ಎಎಸ್‌ಡಿ 2012, ದಿನಾಂಕ:21.05.2012 ರಲ್ಲಿ 18.07.2011 ರಿಂದ ಎಂಬ ದಿನಾಂಕದ ಬದಲಿಗೆ 17.04.2012 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ.ರಾಮಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

**ಪಿ.ಆರ್. 2072**

## ಕಂದಾಯ ಸಚಿವಾಲಯ

**ವಿಷಯ :** 2012-13 ನೇ ಸಾಲಿನಲ್ಲಿ ಕರ್ನಾಟಕ ರಾಜ್ಯದ ಕೆಲವೊಂದು ಜಿಲ್ಲೆಗಳ ತಾಲ್ಲೂಕುಗಳನ್ನು ಬರ ಪೀಡಿತವೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ: ಆರ್‌ಡಿ 29 ಟಿಎನ್‌ಆರ್ 2012, ದಿನಾಂಕ: 04-10-2011, 07-10-2011, 15-10-2011, 08-11-2011 ಮತ್ತು 01-02-2012.

2) ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರ ಇವರ ಪತ್ರ ದಿನಾಂಕ:22-07-2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಸರ್ಕಾರಿ ಆದೇಶಗಳಲ್ಲಿ 24 ಜಿಲ್ಲೆಗಳ 123 ತಾಲ್ಲೂಕುಗಳನ್ನು 2011-12ನೇ ಸಾಲಿಗೆ ಬರ ಪೀಡಿತ ತಾಲ್ಲೂಕುಗಳೆಂದು ಘೋಷಿಸಲಾಗಿದೆ.

ಮೇಲೆ ಓದಲಾದ (2)ರಲ್ಲಿ ನಿರ್ದೇಶಕರು, ಕರ್ನಾಟಕ ರಾಜ್ಯ ನೈಸರ್ಗಿಕ ವಿಕೋಪ ಉಸ್ತುವಾರಿ ಕೇಂದ್ರರವರ ವರದಿ ಆಧಾರದ ಮೇರೆಗೆ ಜುಲೈ 22, 2012ರ ವರೆಗೆ ಮಳೆ ಪ್ರಮಾಣದ ಕೊರತೆ ಮತ್ತು ಸತತ 6 ವಾರಗಳು ಮತ್ತು ಅಧಿಕ ಅವಧಿಗೆ ಒಣ ವಾತಾವರಣ ಮತ್ತು ತೇವಾಂಶದ ಪರಿಸ್ಥಿತಿ ಆಧರಿಸಿ, ರಾಜ್ಯದಲ್ಲಿನ 10 ಜಿಲ್ಲೆಯ 19 ತಾಲ್ಲೂಕುಗಳನ್ನು ಬರ ಪೀಡಿತ ತಾಲ್ಲೂಕುಗಳೆಂದು ಪರಿಗಣಿಸಬಹುದು. ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂ: ಆರ್‌ಡಿ 225 ಟಿಎನ್‌ಆರ್ 2012, ಬೆಂಗಳೂರು, ದಿನಾಂಕ:26-07-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಜ್ಯದ ಈ ಕೆಳಕಂಡ 10 ಜಿಲ್ಲೆಗಳ 19 ತಾಲ್ಲೂಕುಗಳನ್ನು ನೀರಾವರಿ ಅಚ್ಚುಕಟ್ಟು ಪ್ರದೇಶ ಹೊರತು ಪಡಿಸಿ, 2012-13ನೇ ಸಾಲಿನಲ್ಲಿ ಬರ ಪೀಡಿತ ತಾಲ್ಲೂಕುಗಳೆಂದು ಘೋಷಿಸಿದೆ ಹಾಗೂ ಈಗಾಗಲೇ 2011-12ನೇ ಸಾಲಿನಲ್ಲಿ ಬರಪೀಡಿತ ತಾಲ್ಲೂಕುಗಳೆಂದು ಘೋಷಿಸಿರುವ 24 ಜಿಲ್ಲೆಗಳ 123 ತಾಲ್ಲೂಕುಗಳನ್ನು 2012-13ನೇ ಸಾಲಿನಲ್ಲಿಯೂ ಮುಂದುವರೆಸಿ, ಆದೇಶಿಸಿದೆ.

| ಕ್ರ.ಸಂ. | ಜಿಲ್ಲೆ | ತಾಲ್ಲೂಕು |
|---|---|---|
| 1 | ಬೆಂಗಳೂರು ನಗರ | ಆನೇಕಲ್ |
| | | ಬೆಂಗಳೂರು ಉತ್ತರ |
| | | ಬೆಂಗಳೂರು ದಕ್ಷಿಣ |
| | | ಬೆಂಗಳೂರು ಪೂರ್ವ |
| 2 | ಬೆಂಗಳೂರು ಗ್ರಾಮಾಂತರ | ಹೊಸಕೋಟೆ |
| | | ನೆಲಮಂಗಲ |
| 3 | ರಾಮನಗರ | ರಾಮನಗರ |
| 4 | ಕೋಲಾರ | ಮಾಲೂರು |
| 5 | ದಾವಣಗೆರೆ | ಚನ್ನಗಿರಿ |
| | | ಹರಿಹರ |
| 6 | ಮೈಸೂರು | ಹುಣಸೂರು |
| | | ಹೆಗ್ಗಡೆದೇವನ ಕೋಟೆ |
| 7 | ಬೆಳಗಾವಿ | ಗೋಕಾಕ್ |
| 8 | ಶಿವಮೊಗ್ಗ | ಭದ್ರಾವತಿ |
| | | ಶಿವಮೊಗ್ಗ |
| | | ಶಿಕಾರಿಪುರ |
| 9 | ಹಾಸನ | ಆಲೂರು |
| 10 | ಚಿಕ್ಕಮಗಳೂರು | ತರಿಕೆರೆ |
| | | ಚಿಕ್ಕಮಗಳೂರು |

ಬರ ಪೀಡಿತವೆಂದು ಘೋಷಿಸಿರುವ ತಾಲ್ಲೂಕುಗಳಲ್ಲಿ ಭೂ ರಹಿತ ಕಾರ್ಮಿಕರು, ಸಣ್ಣ ಮತ್ತು ಅತಿಸಣ್ಣ ರೈತರಿಗೆ ಉದ್ಯೋಗ ಖಾತ್ರಿ ಯೋಜನೆಯಡಿ ಉದ್ಯೋಗ ಒದಗಿಸುವ ಕ್ರಮ, ಕುಡಿಯುವ ನೀರು ಸರಬರಾಜು, ಮೇವು ಸರಬರಾಜು, ಜಾನುವಾರುಗಳ ಸಂರಕ್ಷಣೆ ಇತ್ಯಾದಿ ಬರ ಪರಿಹಾರ ಕಾರ್ಯಗಳನ್ನು ಹಾಲಿ ಇರುವ ನಿಯಮಾವಳಿ ಅನ್ವಯ ತ್ವರಿತವಾಗಿ ಕೈಗೊಳ್ಳಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎಂ.ಆನಂದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ವಿ.ನಿ & ಸೇವೆಗಳು-2)

**ಪಿ.ಆರ್. 2025**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಗೌಡಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಮುಸದ/ಲೆಶಾಖೆ/ಲೆಸ–1/ಭೂಸ್ವಾಪ್ರ/2012/1451, ದಿನಾಂಕ 12/06/2012.

**ಪ್ರಸ್ತಾವನೆ:**

ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಗೌಡಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಲ್ಕೆರೆ ಗ್ರಾಮದ ಜಮೀನುಗಳಿಗೆ ನಂಜನಗೂಡು ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ಆದೇಶಾನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 08/04/1993
- ಭೂಪರಿಹಾರ ಧನದ ಐತೀರ್ಪು ಹೊರಡಿಸಿದ ದಿನಾಂಕ 25/03/1995.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ನಂಜನಗೂಡು ಸಿವಿಲ್ ನ್ಯಾಯಾಲಯ(ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ:136/02ನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯವು ದಿನಾಂಕ 06/03/2009ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆ ಜಮೀನಿಗೆ ರೂ.40,040/–ಗಳ ಪರಿಹಾರ ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 991 ಎಲ್‌ಸಿಎಂ 2009, ದಿನಾಂಕ 23/05/09ರಂದು ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ ಸಂ | ಎಲ್‌ಎಸಿ | ಅಲ್ಕೆರೆ ಅಗ್ರಹಾರ ಗ್ರಾಮದ ಸ.ನಂ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 136/02 | 52 | 2–14 | 1,61,207–00 |
| **ಒಟ್ಟು** | | | | **1,61,207–00** |

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 98 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ 31ನೇ ಜುಲೈ 2012.**

ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಗೌಡಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಲ್ಕೆರೆ ಗ್ರಾಮದ ಮೇಲ್ಕಂಡ ಸ.ನಂ.ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ.1,61,207–00ಗಳನ್ನು (ಒಂದು ಲಕ್ಷದ ಅರವತ್ತೊಂದು ಸಾವಿರದ ಇನ್ನೂರ ಏಳು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.1,61,207/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1847**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು, ಮರದಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ನ್ಯಾಯಾಲಯದ ಆದೇಶನುಸಾರ ಹೆಚ್ಚುವರಿ ಪರಿಹಾರ ಧನ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2012–13/3616, ದಿನಾಂಕ 23/06/2012.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು ಮರದಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕೋರವಾರ ಗ್ರಾಮದ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನನುಸಾರ ಹೆಚ್ಚುವರಿ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಹೆಚ್ಚುವರಿ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಈ ಕೆಳಕಂಡಂತಿವೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ: 27/04/2000.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 11(ಎ)ರಡಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ 21/05/2002.

ಭೂಸ್ವಾಧೀನಾಧಿಕಾರಿಗಳು ರಚಿಸಿದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬಿಜಾಪುರ ನ್ಯಾಯಾಧೀಶರು(ಹಿರಿಯ ವಿಭಾಗ) ಇಲ್ಲಿ ಎಲ್.ಎ.ಸಿ. ಸಂಖ್ಯೆ:190, 193, 196, 194, 195 ಮತ್ತು 189/03ನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯ ಎಲ್.ಎ.ಸಿ. ಸಂಖ್ಯೆ:194, 195 ಮತ್ತು 189/03ರಲ್ಲಿ ದಿನಾಂಕ 17/08/2006ರಂದು ಹಾಗೂ ಎಲ್.ಎ.ಸಿ. ಸಂಖ್ಯೆ:190, 193 ಮತ್ತು 196/03ರಲ್ಲಿ ದಿನಾಂಕ 24/06/06ರಂದು ನೀಡಿರುವ ಆದೇಶದಲ್ಲಿ ಪ್ರತಿ ಎಕರೆಗೆ ರೂ.32,500/–ಗಳಂತೆ ಹೆಚ್ಚುವರಿ ಪರಿಹಾರ ಧನವನ್ನು ಹಾಗೂ ಮರಗಿಡಗಳಿಗೆ ಶೇ.25ರಷ್ಟು ಹಾಗೂ ಬಾವಿಗಳಿಗೆ ಶೇ.25ರಷ್ಟು ಹೆಚ್ಚುವರಿ ದರವನ್ನು ನಿಗದಿಪಡಿಸಿ ಆದೇಶಿಸಿದೆ.

ಸಿವಿಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 118 ಎಲ್‌ಸಿಬಿ 2008, ದಿನಾಂಕ 04/08/2008ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚುವರಿ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಈ ಕೆಳಕಂಡಂತಿದೆ.

| ಕ್ರ.ಸಂ. | ಎಲ್‌ಎಸಿ ಸಂಖ್ಯೆ | ಕೋರವಾರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 193/03 | 286/2 | 11–17 | 719540 |
| 2 | 194/03 | 286/1 | 5–37 | 393516 |
| 3 | 196/03 | 292/1ಎ | 1–00 | 51377 |
| 4 | 189/03 | 283/2 | 0–34 | 36067 |
| 5 | 195/03 | 394/1 | 0–09 | 14941 |
| 6 | 190/03 | 293/1 | 0–15 | 24907 |
| | **ಒಟ್ಟು** | | | **1240348** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 101 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ 21ನೇ ಜುಲೈ 2012.**

ಬಿಜಾಪುರ ಜಿಲ್ಲೆ, ಸಿಂಧಗಿ ತಾಲ್ಲೂಕು, ಪುರದಾಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕೋರವಾರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ ಪ್ರಕರಣದಲ್ಲಿ ನೀಡಿದ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಮೊತ್ತ ರೂ.12,40,348-00 (ಹನ್ನೆರಡು ಲಕ್ಷದ ನಲವತ್ತು ಸಾವಿರದ ಮುನ್ನೂರ ನಲವತ್ತೆಂಟು ರೂಪಾಯಿಗಳು ಮಾತ್ರ)ಗಳನ್ನು ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012-13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ.12,40,348/-ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1848**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಮಂಡ್ಯ ಜಿಲ್ಲೆ, ಶ್ರೀರಂಗಪಟ್ಟಣ ತಾಲ್ಲೂಕು, ಕರಿಘಟ್ಟ ಏತ ನೀರಾವರಿ ಯೋಜನೆಯ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ/ತಾಂ.ಸ.7/ಸ.ಇಂ.15/ ಮಂಡ್ಯ ಜಿಲ್ಲೆ ಮಳವಳ್ಳಿ ತಾ: ಟೆಂಡರ್/ 2012-13/2368, ದಿನಾಂಕ: 04.07.2012.

**ಪ್ರಸ್ತಾವನೆ:**

ಮಂಡ್ಯ ಜಿಲ್ಲೆ, ಶ್ರೀರಂಗಪಟ್ಟಣ ತಾಲ್ಲೂಕು, ಕರಿಘಟ್ಟ ಏತ ನೀರಾವರಿ ಯೋಜನೆಯ ಅಭಿವೃದ್ಧಿ ಕಾಮಗಾರಿಯ ರೂ.90.00ಲಕ್ಷಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮೈಸೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ 2ನೇ ಬಾರಿಗೆ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಮಂಡ್ಯ ಜಿಲ್ಲಾ ಟೆಂಡರ್ ಬುಲೆಟಿನ್ | 14.05.2012 |
| ಉದಯವಾಣಿ ದಿನಪತ್ರಿಕೆ | 20.05.2012 |
| ಡೆಕ್ಕನ್ ಹೆರಾಲ್ಡ್ | 21.05.2012 |

ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್‌ನ ತಾಂತ್ರಿಕ ಬಿಡ್ ಅನ್ನು ತೆರೆಯಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು, ಇವರ ಟೆಂಡರ್ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 12.06.2012ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 88,81,679/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 89,79,102/- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಕೆ.ಬಿ.ಕುಮಾರ್, 1ನೇ ದರ್ಜೆ ಗುತ್ತಿಗೆದಾರರು | 142,51,032/- | 60.45 ಹೆಚ್ಚು | 58.71 ಹೆಚ್ಚು |

ಮೇಲ್ಕಂಡಂತೆ ಶ್ರೀ ಕೆ.ಬಿ.ಕುಮಾರ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 58.71 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ.14.99% ಹೆಚ್ಚಿನ ದರಗಳಿಗೆ ಅಂದರೆ ರೂ.103,25,069/- ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 62 ಏನೀಯೋ 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 04ನೇ ಆಗಸ್ಟ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆ, ಶ್ರೀರಂಗಪಟ್ಟಣ ತಾಲ್ಲೂಕು, ಕರಿಘಟ್ಟ ಏತ ನೀರಾವರಿ ಯೋಜನೆಯ ಅಭಿವೃದ್ಧಿ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 89,79,102/-ಗಳ ಮೇಲೆ ಶೇ. 14.99ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 103,25,069/-ಗಳಿಗೆ (ರೂ ಒಂದು ಕೋಟಿ ಮೂರು ಲಕ್ಷ ಇಪ್ಪತ್ತೈದು ಸಾವಿರದ ಅರವತ್ತೊಂಬತ್ತು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ಕೆ.ಬಿ.ಕುಮಾರ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1849**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ನಿಡಘಟ್ಟ ಕೆನಾಲ್‌ಗೆ ಚಾನಲ್ ನಿರ್ಮಾಣದ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 12 ಮಸಾವಿ (ತಾಂತ್ರಿಕ) 2011(6), ದಿನಾಂಕ: 05.03.2011
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ/ ತಾಂ.ಸ.2/ಸ.ಇಂ.17/ ಚಿ.ಜಿ/ ಕ.ತಾ/ ನಿಡಘಟ್ಟ ಕೆನಾಲ್/ ಟೆಂಡರ್ /2012-13/1928, ದಿನಾಂಕ: 24.05.2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎ.ಐ.ಬಿ.ಪಿ ಕಾರ್ಯಕ್ರಮದಡಿ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ನಿಡಘಟ್ಟ ಕೆನಾಲ್‌ಗೆ ಚಾನಲ್ ನಿರ್ಮಾಣದ ಕಾಮಗಾರಿಯ ರೂ.75.00ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಮುಖ್ಯ

ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಚಿಕ್ಕಮಗಳೂರು ಜಿಲ್ಲಾ ಟೆಂಡರ್ ಬುಲೆಟಿನ್ | 06.02.2012 |
| ಉದಯವಾಣಿ ಮತ್ತು ಇಂಡಿಯನ್ ಎಕ್ಸ್‌ಪ್ರೆಸ್ ದಿನ ಪತ್ರಿಕೆ | 31.01.2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್‌ನ ತಾಂತ್ರಿಕ ಬಿಡ್ ಅನ್ನು ತೆರೆಯಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಮಾತ್ರ ಭಾಗವಹಿಸಿದ್ದು, ಇವರ ಟೆಂಡರ್ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 13.03.2012ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 74,15,200/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 74,58,894/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಸಿ.ಹೆಚ್.ವಿ.ಎನ್.ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು | 86,23,887/– | 16.30 ಹೆಚ್ಚು | 15.61 ಹೆಚ್ಚು |

ಮೇಲ್ಕಂಡಂತೆ ಶ್ರೀ ಸಿ.ಹೆಚ್.ವಿ.ಎನ್.ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 15.61 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ.12.00% ಹೆಚ್ಚಿನ ದರಗಳಿಗೆ ಅಂದರೆ ರೂ.83,53,961/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 61 ಮಸಾವಿ 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 04ನೇ ಆಗಸ್ಟ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ನಿಡಘಟ್ಟ ಕೆನಾಲ್‌ಗೆ ಚಾನಲ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 74,58,894/–ಗಳ ಮೇಲೆ ಶೇ. 12.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 83,53,961/–ಗಳಿಗೆ (ರೂ ಎಂಬತ್ತ ಮೂರು ಲಕ್ಷ ಐವತ್ತ ಮೂರು ಸಾವಿರದ ಒಂಬತ್ತು ನೂರ ಅರವತ್ತೊಂದು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ಸಿ.ಹೆಚ್.ವಿ.ಎನ್.ರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1853**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ಶಿರಶ್ಯಾಡ ಗ್ರಾಮದ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ದಿನಾಂಕ: 07.07.2012ರ ಬಿಜಾಪುರ, ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–9/ಶಿರಶ್ಯಾಡ ಬ್ಯಾರೇಜ್ ಸಹಿತ ಸೇತುವೆ/2012–13/3945.

**ಪ್ರಸ್ತಾವನೆ :**

ಮೇಲ್ಕಂಡ ಕಾಮಗಾರಿಗೆ 2012–13ನೇ ಸಾಲಿಗೆ ಮುಂದುವರೆಸಲಾದ 2010–11ನೇ ಸಾಲಿನ ಸಣ್ಣ ನೀರಾವರಿ ಬೆಳಗಾವಿ ವೃತ್ತದ ದರಪಟ್ಟಿಯಂತೆ ರೂ.312.00ಲಕ್ಷ ರೂ.ಗಳಿಗೆ ತಯಾರಿಸಿದ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರು ಮೇಲೆ ಓದಲಾದ ಪತ್ರದಲ್ಲಿ ಆಡಳಿತಾತ್ಮಕ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಉದ್ದೇಶಿತ ಬ್ಯಾರೇಜಿನ ಉದ್ದ 89.00ಮೀ, ಎತ್ತರ 4.00ಮೀ. ಹಾಗೂ ಮೇಲ್ಭಾಗದಲ್ಲಿ ಸೇತುವೆಯ ಅಗಲ 4.70 ಮೀ. ಆಗಿದ್ದು, 17 ಮುಖ್ಯ ನಡುಗಂಭಗಳು, 18 ನೆಪಮಾತ್ರ ಕಂಭಗಳು ಹಾಗೂ 36 ಕಿಂಡಿಗಳೊಂದಿಗೆ ನಿರ್ಮಿಸಲು ವಿನ್ಯಾಸಿಸಿದೆ. ಇದರಲ್ಲಿ ಶೇಖರಿಸಬಹುದಾದ 0.4579ದಶಲಕ್ಷ ಘನ ಮೀಟರ್ ನೀರಿನಿಂದ ಒಟ್ಟು 94 ಹೆಕ್ಟೇರ್ ಅಚ್ಚುಕಟ್ಟು ಪ್ರದೇಶದಲ್ಲಿ ಅರೆ ನೀರಾವರಿ ಹಿಂಗಾರು ಬೆಳೆಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಿದೆ.

ಯೋಜನೆಯ ಲಾಭ ವೆಚ್ಚದ ಅನುಪಾತ ಶೇ.10ರ ಬಡ್ಡಿ ದರದಲ್ಲಿ 1.50 ಆಗಿದ್ದು ಯೋಜನೆಯು ಆರ್ಥಿಕವಾಗಿ ಶಕ್ಯವಾಗಿರುತ್ತದೆ.

ಅಂದಾಜು ಪಟ್ಟಿಯನ್ನು ದಿನಾಂಕ 26.06.2012ರಂದು ನಡೆದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಸಭೆಗೆ ಮಂಡಿಸಲಾಗಿದ್ದು ಸಮಿತಿಯು ಕೆಲವು ಷರಾಗಳೊಂದಿಗೆ ಅಂದಾಜಿಗೆ ತೀರುವಳಿ ನೀಡಿದೆ.

ಈ ಕಾಮಗಾರಿಯು 2012–13ನೇ ಸಾಲಿನ "ಅಪೆಂಡಿಕ್ಸ್–ಇ"ನಲ್ಲಿ, ಲೆಕ್ಕ ಶೀರ್ಷಿಕೆ 4702–00–101–5–01–139 ಅಣೆಕಟ್ಟು ಮತ್ತು ಪಿಕಪ್‌ಗಳ ನಿರ್ಮಾಣ–ಪ್ರಧಾನ ಕಾಮಗಾರಿಗಳು ರಡಿಯಲ್ಲಿ ರೂ.315.00 ಲಕ್ಷಗಳ ಅಂದಾಜು ಮೊತ್ತ ಹಾಗೂ ರೂ.105.00 ಲಕ್ಷಗಳ ಅನುದಾನದೊಂದಿಗೆ ಸೇರಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 87 ಅಪಿಬಿಂ 2012, ಬೆಂಗಳೂರು, ದಿನಾಂಕ: 28ನೇ ಜುಲೈ 2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ಶಿರಶ್ಯಾಡ ಗ್ರಾಮದ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಅಂದಾಜು ಪಟ್ಟಿಗೆ ಸಣ್ಣ ನೀರಾವರಿ, ಬೆಳಗಾವಿ ವೃತ್ತದ 2012–13ನೇ ಸಾಲಿಗೆ ಮುಂದುವರೆಸಲಾದ 2010–11ನೇ ಸಾಲಿನ ದರಪಟ್ಟಿಯಂತೆ ತಯಾರಿಸಲಾದ 312.00 ಲಕ್ಷ ರೂ.ಗಳ (ಮುನ್ನೂರ ಹನ್ನೆರಡು ಲಕ್ಷ ರೂ.ಗಳು ಮಾತ್ರ) ಅಂದಾಜು ಪಟ್ಟಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.

2. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.

3. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.

4. ಕಾಮಗಾರಿಯ ಅಂದಾಜು ಪಟ್ಟಿಗೆ ಸಂಬಂಧಿಸಿದಂತೆ ಸಣ್ಣ ನೀರಾವರಿ ದಿನಾಂಕ: ದಿನಾಂಕ 26.06.2012ರಂದು ನಡೆದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯು ಸಭೆಯಲ್ಲಿ ನೀಡಿರುವ ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.

5. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.

6. ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.

7. ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್ ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.

8. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.

9. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.

10. ಈ ಯೋಜನೆಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆ ಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ: 16/05/2008ರಲ್ಲಿ ನೀಡಲಾಗಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1854**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಗೌಡಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಮುಸದ/ಲೆಶಾಖೆ/ಲೆಸ–1/ಭೂಸ್ವಾಪ್ರ/2011–12/2652, ದಿನಾಂಕ 22/11/2011.

ಪ್ರಸ್ತಾವನೆ:

ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಗೌಡಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಲ್ಕೆರೆ ಗ್ರಾಮದ ಜಮೀನುಗಳಿಗೆ ನಂಜನಗೂಡು ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ಆದೇಶಾನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 11/02/1985
- ಭೂಪರಿಹಾರ ಧನದ ಐತೀರ್ಪು ಹೊರಡಿಸಿದ ದಿನಾಂಕ 18/01/1989.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ನಂಜನಗೂಡು ಸಿವಿಲ್ ನ್ಯಾಯಾಲಯ(ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ:187/91ನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯವು ದಿನಾಂಕ 25/03/94ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆ ಜಮೀನಿಗೆ ರೂ.40,040/–ಗಳ ಪರಿಹಾರ ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 962 ಎಲ್‌ಸಿಎಂ 2009, ದಿನಾಂಕ 23/05/09ರಂದು ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ ಸಂ | ಎಲ್‌ಎಸಿ | ಅಲ್ಕೆರೆ ಅಗ್ರಹಾರ ಗ್ರಾಮದ ಸ.ನಂ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 189/01 | 54 | 6–05 | 2,04,481–00 |
| | **ಒಟ್ಟು** | | | **2,04,481–00** |

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 18 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ 31ನೇ ಜುಲೈ 2012.**

ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಗೌಡಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಲ್ಕೆರೆ ಗ್ರಾಮದ ಮೇಲ್ಕಂಡ ಸ.ನಂ.ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ.2,04,481–00ಗಳನ್ನು (ಎರಡು ಲಕ್ಷದ ನಾಲ್ಕು ಸಾವಿರದ ನಾನೂರ ಎಂಭತ್ತೊಂದು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.

3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.2,04,481/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1856**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಗೌಡಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಮುಸದ/ಲೆಶಾಖೆ/ಲೆಸ–1/ಭೂಸ್ವಾಪ್ರ/2011/1983, ದಿನಾಂಕ 27/08/2011.

**ಪ್ರಸ್ತಾವನೆ:**

ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಗೌಡಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಲ್ಕೆರೆ ಗ್ರಾಮದ ಜಮೀನುಗಳಿಗೆ ನಂಜನಗೂಡು ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ಆದೇಶಾನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 08/04/1993
- ಭೂಪರಿಹಾರ ಧನದ ಐತೀರ್ಪು ಹೊರಡಿಸಿದ ದಿನಾಂಕ 25/03/1995.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ನಂಜನಗೂಡು ಸಿವಿಲ್ ನ್ಯಾಯಾಲಯ(ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ:134/02ನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯವು ದಿನಾಂಕ 06/03/2009ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆ ಜಮೀನಿಗೆ ರೂ.40,040/–ಗಳ ಪರಿಹಾರ ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ

ಸಂಖ್ಯೆ:ಆರ್‌ಡಿ 991 ಎಲ್‌ಸಿಎಂ 2009, ದಿನಾಂಕ 23/05/09ರಂದು ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ | ಅಲ್ಕೆರೆ ಅಗ್ರಹಾರ ಗ್ರಾಮದ ಸ.ನಂ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 134/02 | 184 | 1–08 | 1,50,282–00 |
| | ಒಟ್ಟು | | | **1,50,282–00** |

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 124 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 31ನೇ ಜುಲೈ 2012.**

ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಗೌಡಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಲ್ಕೆರೆ ಗ್ರಾಮದ ಮೇಲ್ಕಂಡ ಸ.ನಂ.ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ.1,50,282–00ಗಳನ್ನು (ಒಂದು ಲಕ್ಷದ ಐವತ್ತು ಸಾವಿರದ ಇನ್ನೂರ ಎಂಭತ್ತೆರಡು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.1,50,282/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1857**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಗೌಡಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ:ಮುಸದ/ಲೆಶಾಖೆ/ಲೆಸ–1/ಭೂಸ್ವಾಪ್ರ/2011/2286, ದಿನಾಂಕ 10/10/2011.

**ಪ್ರಸ್ತಾವನೆ:**

ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಗೌಡಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಲ್ಕೆರೆ ಗ್ರಾಮದ ಜಮೀನುಗಳಿಗೆ ನಂಜನಗೂಡು ಸಿವಿಲ್ ನ್ಯಾಯಾಲಯ (ಹಿರಿಯ ವಿಭಾಗ) ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ಆದೇಶಾನುಸಾರ ಹೆಚ್ಚಿನ

ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿದ್ದಾರೆ. ಭೂಸ್ವಾಧೀನ ಪ್ರಕ್ರಿಯೆ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 08/04/1993
- ಭೂಪರಿಹಾರ ಧನದ ಐತೀರ್ಪು ಹೊರಡಿಸಿದ ದಿನಾಂಕ 25/03/1995.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ನಂಜನಗೂಡು ಸಿವಿಲ್ ನ್ಯಾಯಾಲಯ(ಹಿರಿಯ ವಿಭಾಗ)ದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ:142/02ನ್ನು ದಾಖಲಿಸಿದ್ದು, ಸಿವಿಲ್ ನ್ಯಾಯಾಲಯವು ದಿನಾಂಕ 06/03/2009ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆ ಜಮೀನಿಗೆ ರೂ.40,040/–ಗಳ ಪರಿಹಾರ ನಿಗದಿಪಡಿಸಿದೆ. ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 991 ಎಲ್‌ಸಿಎಂ 2009, ದಿನಾಂಕ 23/05/09ರಂದು ಅಭಿಪ್ರಾಯ ನೀಡಿದೆ. ಪಾವತಿಸಬೇಕಾದ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ ಸಂ | ಎಲ್‌ಎಸಿ | ಅಲ್ಕೆರೆ ಅಗ್ರಹಾರ ಗ್ರಾಮದ ಸ.ನಂ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 142/02 | 209 | 2–00 | 2,50,470–00 |
| | | **ಒಟ್ಟು** | | **2,50,470–00** |

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 146 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ 31ನೇ ಜುಲೈ 2012.**

ಚಾಮರಾಜನಗರ ಜಿಲ್ಲೆ, ಯಳಂದೂರು ತಾಲ್ಲೂಕಿನ ಗೌಡಹಳ್ಳಿ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಅಲ್ಕೆರೆ ಗ್ರಾಮದ ಮೇಲ್ಕಂಡ ಸ.ನಂ.ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ಆದೇಶದಂತೆ ಪರಿಹಾರ ರೂ.2,50,470–00ಗಳನ್ನು (ಎರಡು ಲಕ್ಷದ ಐವತ್ತು ಸಾವಿರದ ನಾನೂರ ಎಪ್ಪತ್ತು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.2,50,470/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1858**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೂಕು, ಅರಸೀಕೆರೆ ದೊಡ್ಡಕೆರೆಯ ಪುನಶ್ಚೇತನ ಮತ್ತು ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 117 ಮಸಾವಿ 2011(ತಾಂತ್ರಿಕ)(7), ದಿನಾಂಕ: 13.12.2011
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ/ ತಾಂ.ಸ.2/ ಸ.ಇಂ.5/ ಅರಸೀಕೆರೆ ದೊಡ್ಡಕೆರೆ/ ಟೆಂಡರ್ ಇಂ.ನಂ.4100/2012–13/2384, ದಿನಾಂಕ 05.07.2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 13ನೇ ಹಣಕಾಸು ಆಯೋಗದ ಅನುದಾನದಡಿ ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೂಕು, ಅರಸೀಕೆರೆ ದೊಡ್ಡಕೆರೆಯ ಪುನಶ್ಚೇತನ ಮತ್ತು ಅಭಿವೃದ್ಧಿ ಕಾಮಗಾರಿಯನ್ನು ಕೈಗೊಳ್ಳಲು ರೂ.473.00ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿದ್ದು. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | ಮೂಲ ಪ್ರಕಟಣೆ | ಮುಂದೂಡಿಕೆ ಪ್ರಕಟಣೆ–4 |
|---|---|---|
| ರಾಜ್ಯ ಟೆಂಡರ್ ಬುಲೆಟಿನ್ | 31.01.2012 | 27.04.2012 |
| ಹಾಸನ ಜಿಲ್ಲಾ ಟೆಂಡರ್ ಬುಲೆಟಿನ್ | | 28.04.2012 |
| ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ಮತ್ತು ಡೆಕ್ಕನ್ ಕ್ರೋನಿಕಲ್ | 07.02.2012 | 04.05.2012 |
| ಉದಯವಾಣಿ ಮತ್ತು ಹೊಸದಿಗಂತ | 07.02.2012 | 03.05.2012 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಮೂವರು ಗುತ್ತಿಗೆದಾರರು ಭಾಗವಹಿಸಿದ್ದು, ಇವರಲ್ಲಿ ಒಬ್ಬರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 23.05.2012ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 449,10,347/– |
|---|---|---|---|---|
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 465,50,640/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಜೆ.ಎಂ.ರಾಮಚಂದ್ರ, 1ನೇ ದರ್ಜೆ ಗುತ್ತಿಗೆದಾರರು | 587,45,688/– | 30.80 ಹೆಚ್ಚು | 26.19 ಹೆಚ್ಚು |

ಮೇಲ್ಕಂಡಂತೆ ಶ್ರೀ ಜೆ.ಎಂ.ರಾಮಚಂದ್ರ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 26.19ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ.12.00% ಹೆಚ್ಚಿನ ದರಗಳಿಗೆ ಅಂದರೆ ರೂ. 521,36,717/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 36 ಕೆಜಿದು 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 02ನೇ ಆಗಸ್ಟ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೂಕು, ಅರಸೀಕೆರೆ ದೊಡ್ಡಕೆರೆಯ ಪುನಶ್ಚೇತನ ಮತ್ತು ಅಭಿವೃದ್ಧಿ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 465,50,640/– ಗಳ ಮೇಲೆ ಶೇ. 12.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 521,36,717/–ಗಳಿಗೆ (ರೂ ಐದು ಕೋಟಿ ಇಪ್ಪತ್ತೊಂದು ಲಕ್ಷ ಮೂವತ್ತಾರು ಸಾವಿರದ ಏಳು ನೂರ ಹದಿನೇಳು ರೂಪಾಯಿಗಳು ಮಾತ್ರ) ಶ್ರೀ ಜೆ.ಎಂ.ರಾಮಚಂದ್ರ, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.

2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1859**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಗಗೊಂಡನ ಹಳ್ಳಿ ಬಳಿ ವೇದಾವತಿ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಪರಿಷ್ಕೃತ ಅಂದಾಜು ಪಟ್ಟಿಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ/ ತಾಂ–4/ ಸಿಂ–9/ ಚಿತ್ರದುರ್ಗ/ ಪರಿಷ್ಕೃತ ಅಂದಾಜು/ 2011–12/ 1871, ದಿನಾಂಕ 17.05.2012.

**ಪ್ರಸ್ತಾವನೆ :**

ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಗಗೊಂಡನ ಹಳ್ಳಿ ಬಳಿ ವೇದಾವತಿ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ. 371.00 ಲಕ್ಷದ ಮೂಲ ಅಂದಾಜಿಗೆ ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(2), ದಿನಾಂಕ: 23.04.2010ರಡಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ದಕ್ಷಿಣ ವಲಯ, ಬೆಂಗಳೂರುರವರು ತಾಂತ್ರಿಕ ಮಂಜೂರಾತಿಯನ್ನು ನೀಡಿರುತ್ತಾರೆ.

ಕಾಮಗಾರಿಯ ಅನುಷ್ಠಾನಕ್ಕಾಗಿ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತದ ಮೇಲೆ ಶೇಕಡ 7.5ರಷ್ಟು ಹೆಚ್ಚಿನ ಮೊತ್ತಕ್ಕೆ ಅಂದರೆ ರೂ. 4,88,43,175/–ಗಳಿಗೆ ಶ್ರೀ ಯು.ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸರ್ಕಾರದ ಆದೇಶದ ಸಂಖ್ಯೆ ಸನೀಇ 22 ಅಪಿಬಂ 2011(ತಾಂತ್ರಿಕ), ದಿನಾಂಕ: 25.04.2011ರಲ್ಲಿ ಅನುಮೋದನೆ ನೀಡಲಾಗಿದೆ. ಕಾಮಗಾರಿ ಪ್ರಗತಿಯಲ್ಲಿದ್ದ ಸಂದರ್ಭದಲ್ಲಿ ಇಲಾಖೆಯ ಅಧಿಕಾರಿಗಳು ಸ್ಥಳ ಪರಿವೀಕ್ಷಣೆ ಮಾಡಿ ನೀಡಿದ ಸೂಚನೆಗಳಂತೆ ಹೆಚ್ಚುವರಿ ಕೆಲಸಗಳನ್ನು ನಿರ್ವಹಿಸಲಾಗಿರುತ್ತದೆ. ಈ ಹೆಚ್ಚಿನ ಪರಿಮಾಣಗಳಿಗೆ ಅನುಗುಣವಾಗಿ ಕಾಮಗಾರಿಯ ವೆಚ್ಚದಲ್ಲಿ ಹೆಚ್ಚಳವಾಗಿದೆ. ಮೂಲ ಅಂದಾಜಿಗಿಂತ ಕಾಮಗಾರಿಯಲ್ಲಿ ರೂ.187.21ಲಕ್ಷಗಳ ಹೆಚ್ಚಿನ ಆರ್ಥಿಕ ಹೊರೆ ಉಂಟಾಗಿದ್ದು, ಈ ಹೆಚ್ಚಿನ ಆರ್ಥಿಕ ಹೊರೆಯಲ್ಲಿ ಅನುಮೋದಿತ ಟೆಂಡರ್ ಪ್ರೀಮಿಯಂ ಸಹ ಸೇರಿದೆ. ಮೂಲ ಅಂದಾಜು ಮೊತ್ತ ರೂ.371.00ಲಕ್ಷಕ್ಕೆ ಹೆಚ್ಚುವರಿ ಮೊತ್ತವನ್ನು ಹೋಲಿಸಿದಾಗ ಶೇ.50.46ರಷ್ಟು ಹೆಚ್ಚಳ ಉಂಟಾಗಿದೆ. ಸದರಿ ಕಾಮಗಾರಿಯ ಪರಿಷ್ಕೃತ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ, ದಕ್ಷಿಣ ವಲಯ, ಬೆಂಗಳೂರುರವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 69 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 19ನೇ ಜುಲೈ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ತಾಲ್ಲೂಕು, ನಾಗಗೊಂಡನ ಹಳ್ಳಿ ಬಳಿ ವೇದಾವತಿ ನದಿಗೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ. 558,21,458/–(ಐದು ಕೋಟಿ ಐವತ್ತೆಂಟು ಲಕ್ಷ ಇಪ್ಪತ್ತೊಂದು ಸಾವಿರದ ನಾಲ್ಕು ನೂರ ಐವತ್ತೆಂಟು ರೂಪಾಯಿಗಳು ಮಾತ್ರ) ಮೊತ್ತದ ಪರಿಷ್ಕೃತ ಅಂದಾಜು ಪಟ್ಟಿಗೆ ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: PWD 454 FC-I:2012, ದಿನಾಂಕ 13.07.2012ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1943**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕಿನ ಪುರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕನ್ನಾಳ ಮತ್ತು ಸಂಗನಾಳ ಗ್ರಾಮಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 30/05/12ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜೆಪಿ/ ಭೂಸ್ವಾಪ್ರ/ 2012-13/3084.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಕನ್ನಾಳ ಮತ್ತು ಸಂಗನಾಳ ಗ್ರಾಮಗಳ ಜಮೀನುಗಳಿಗೆ ಕೊಪ್ಪಳದ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿದ್ದಾರೆ.

ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ಹೊರಡಿಸಿದ ದಿನಾಂಕ 27/02/2003.
- ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ರಚಿಸಿದ ದಿನಾಂಕ 06/12/2005

ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕೊಪ್ಪಳ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಸಂಖ್ಯೆ:537/08 ರಿಂದ 544/08ನ್ನು ದಾಖಲಿಸಿದು, ಸಿವಿಲ್ ನ್ಯಾಯಾಲಯವು ದಿನಾಂಕ 28/06/08ರಂದು ನೀಡಿದ ಆದೇಶದಲ್ಲಿ ಪ್ರತಿ ಎಕರೆಗೆ ರೂ.1,08,000/-ಗಳನ್ನು ನಿಗದಿಪಡಿಸಿ ಆದೇಶಿಸಿದೆ.

ಸಿವಿಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 626 ಎಲ್‌ಸಿಜಿ 2009 ಮತ್ತು ಆರ್‌ಡಿ 727 ಎಲ್‌ಸಿಜಿ 2009, ದಿನಾಂಕ 23/05/09ರಲ್ಲಿ ಅಭಿಪ್ರಾಯ ನೀಡಿದೆ.

ಪಾವತಿಸಬೇಕಾದ ಬಾಕಿ ಪರಿಹಾರ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್‌ಎಸಿ ಸಂಖ್ಯೆ | ಸ.ನಂ. | ಗ್ರಾಮ | ವಿಸ್ತೀರ್ಣ ಎ-ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 537/08 | 21/ಕೆ | ಕನ್ನಾಳ | 1-12 | 464110 |
| 2 | 538/08 | 34/1ಎ | ಕನ್ನಾಳ | 0-10 | 89656 |
| 3 | 539/08 | 62/1 | ಕನ್ನಾಳ | 0-20 | 178812 |
| 4 | 540/08 | 34/1ಎ | ಕನ್ನಾಳ | 0-20 | 178812 |
| 5 | 541/08 | 34/1ಬಿ | ಕನ್ನಾಳ | 0-10 | 89656 |
| 6 | 542/08 | 16/1-5 | ಸಂಗನಾಳ | 0-10 | 89190 |
| 7 | 543/08 | 16/1-10ಎ | ಸಂಗನಾಳ | 0-10 | 89190 |
| 8 | 544/08 | 34/2 | ಕನ್ನಾಳ | 0-10 | 89656 |
| | | | | **ಒಟ್ಟು** | **1269082** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 91 ಭೂಸ್ವಾಪ್ರ 2012, ಬೆಂಗಳೂರು, ದಿನಾಂಕ 21ನೇ ಜುಲೈ 2012.**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಪುರ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಕನ್ನಾಳ ಮತ್ತು ಸಂಗನಾಳ ಗ್ರಾಮಗಳಿಗೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಕೊಪ್ಪಳದ (ಹಿರಿಯ ಶ್ರೇಣಿ) ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.12,69,082/–ಗಳನ್ನು (ಹನ್ನೆರಡು ಲಕ್ಷದ ಅವತ್ತೊಂಭತ್ತು ಸಾವಿರದ ಎಂಭತ್ತೆರಡು ರೂ.ಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ.12,69,082/–ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ 20/10/10ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 1944**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ನರಿಂಗಾನ ಗ್ರಾಮದ ಚ್ಚೆನ್ನಕಟ್ಟ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ/ ತಾಂಸ–5– ಸ.ಇಂ. –11/ ದ.ಕ.ಜಿ/ ಬಂ.ತಾ/ ಚೆನ್ನಕಟ್ಟ/ ಇಪ್ರೊಕ್ಯೂರ್‌ಮೆಂಟ್/ಟೆಂಡರ್ ಅನುಮೋದನೆ/2011/2326, ದಿನಾಂಕ 27.06.2012.

**ಪ್ರಸ್ತಾವನೆ:**

ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ನರಿಂಗಾನ ಗ್ರಾಮದ ಚ್ಚೆನ್ನಕಟ್ಟ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ರೂ.25.00ಲಕ್ಷಗಳ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಮೈಸೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ 4ನೇ ಬಾರಿಗೆ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ದಕ್ಷಿಣ ಕನ್ನಡ ಜಿಲ್ಲಾ ಟೆಂಡರ್ ಬುಲೆಟಿನ್ | 19.03.2012 |
| ಉದಯವಾಣಿ ಮತ್ತು ಸುದ್ದಿ ಬಿಡುಗಡೆ ದಿನ ಪತ್ರಿಕೆ | 30.03.2012 |

ದಿನಾಂಕ 23.04.2012ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್ ಅನ್ನು ತೆರೆಯಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರ ಟೆಂಡರ್ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 24,04,370/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 24,10,497/– |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಬಿ.ಹಸೈನಾರ್, 1ನೇ ದರ್ಜೆ ಗುತ್ತಿಗೆದಾರರು | 28,83,704/– | 19.936 ಹೆಚ್ಚು | 19.63 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಿ.ಹಸೈನಾರ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 19.63 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ.14.00% ಹೆಚ್ಚಿನ ದರಗಳಿಗೆ ಅಂದರೆ ರೂ. 27,47,967/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 85 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 11ನೇ ಜುಲೈ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ನರಿಂಗಾನ ಗ್ರಾಮದ ಚೆನ್ನಕಟ್ಟೆ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 24,10,497/–ಗಳ ಮೇಲೆ ಶೇ. 14.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 27,47,967/–ಗಳಿಗೆ (ರೂ ಇಪ್ಪತ್ತೇಳು ಲಕ್ಷ ನಲವತ್ತ ಏಳು ಸಾವಿರದ ಒಂಬತ್ತು ನೂರ ಅರವತ್ತ ಏಳು ರೂಪಾಯಿಗಳು ಮಾತ್ರ) ಶ್ರೀ ಬಿ.ಹಸೈನಾರ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ,**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಪಿ.ಆರ್. 2073**

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ಕಂಇ 23 ಎಡಿಇ 2012, ಬೆಂಗಳೂರು, ದಿನಾಂಕ:07.07.2012**

ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 23 ಎಡಿಇ 2012, ದಿನಾಂಕ:16.06.2012 ರಲ್ಲಿ ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ.

1. ಪುಟ ಸಂಖ್ಯೆ:1 ರ ಪ್ರಸ್ತಾವನೆ ಭಾಗದಲ್ಲಿ ಮೊದಲನೆ ಖಂಡಿಕೆಯ 15ನೇ ಸಾಲಿನಲ್ಲಿ ಶ್ರೀ ರಂಗನಾಥಯ್ಯ, ವಿಶೇಷ ತಹಶೀಲ್ದಾರ್, ಪ್ರಸ್ತುತ ಚುನಾವಣಾ ತಹಶೀಲ್ದಾರ್, ರಾಮನಗರ (ಹಾಲಿ ಅಮಾನತ್ತಿನಲ್ಲಿ) ಆರೋಪಿ–3 ಶ್ರೀ ಸುರೇಶ್ ರಾಜಸ್ವ ನಿರೀಕ್ಷಕರು, ಬೆಂಗಳೂರು ಉತ್ತರ ತಾಲ್ಲೂಕು, ದಸ್ತಗಿರಿ ಮಾಡಲಾಗಿತ್ತು ಎಂಬುದರ ಬದಲಾಗಿ **ಶ್ರೀ ರಂಗನಾಥಯ್ಯ, ವಿಶೇಷ ತಹಶೀಲ್ದಾರ್, ಪ್ರಸ್ತುತ ಚುನಾವಣಾ ತಹಶೀಲ್ದಾರ್, ರಾಮನಗರ (ಹಾಲಿ ಅಮಾನತ್ತಿನಲ್ಲಿ) ಬೆಂಗಳೂರು ಉತ್ತರ ತಾಲ್ಲೂಕು ರವರುಗಳನ್ನು ದಸ್ತಗಿರಿ ಮಾಡಲಾಗಿತ್ತು ಎಂದು ತಿದ್ದಿ ಓದಿಕೊಳ್ಳುವುದು.**

2. ಸದರಿ ಆದೇಶದ ಪುಟ ಸಂಖ್ಯೆ:2 ರ ಮೊದಲನೇ ಖಂಡಿಕೆಯ ನಂತರ ಭಾಗದಲ್ಲಿ ತನಿಖಾ ವರದಿಯಲ್ಲಿನ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಎಂಬುದರ ಬದಲಾಗಿ **"ತನಿಖಾಧಿಕಾರಿಗಳು ಸಲ್ಲಿಸಿರುವ ಪ್ರಥಮ ವರ್ತಮಾನ ವರದಿ, ಫಿರ್ಯಾದು, ಪ್ರಶ್ನಿತ ಜಮೀನಿಗೆ ಸಂಬಂಧಿಸಿದ ಕಂದಾಯ ದಾಖಲೆಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಎಂದು ತಿದ್ದಿ ಓದಿಕೊಳ್ಳುವುದು"**.

3. ಸದರಿ ಆದೇಶದ ಪುಟ ಸಂಖ್ಯೆ:2 ರ ಮೊದಲನೆ ಖಂಡಿಕೆಯ ನಂತರದ ಭಾಗದಲ್ಲಿ ಹಾಗೂ 5ನೇ ಸಾಲಿನಲ್ಲಿ ಮತ್ತು ಆದೇಶ ಭಾಗದ 3ನೇ ಪುಟದ ಮೊದಲನೆ ಖಂಡಿಕೆಯ 2,3 ಮತ್ತು 4ನೇ ಸಾಲಿನಲ್ಲಿ ಲಂಚ ನಿರೋಧ ಕಾಯ್ದೆ 1988 ರನ್ವಯ ಕಲಂ 7 ಮತ್ತು 13(1)(ಡಿ) ಸಹವಾಚನ ಕಲಂ 13(2) ಮತ್ತು ಭ್ರಷ್ಟಾಚಾರ ನಿಯಂತ್ರಣ ಕಾಯ್ದೆ 1988 ರ ಕಲಂ 19(1)(ಬಿ) ರನ್ವಯ ಎಂಬುದರ ಬದಲಾಗಿ **"ಕಲಂ 13(1)(ಡಿ)(ii) ಸಹವಾಚನ ಕಲಂ 13(2) ಹಾಗೂ ಭಾರತೀಯ ದಂಡಸಂಹಿತೆಯ ಕಲಂ 120(ಬಿ) ಗಳನ್ವಯ" ಎಂದು ತಿದ್ದಿ ಓದಿಕೊಳ್ಳುವುದು"**.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ.ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 1962**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಅರಣ್ಯ ಪ್ರದೇಶದಲ್ಲಿ ಪ್ರದರ್ಶನ ನಿಷೇಧವನ್ನು ಸೃಷ್ಟಿಸಿ ಭಾರತದ ಕಾಡೆಮ್ಮೆಗಳ ಸಂರಕ್ಷಣೆ ಮತ್ತು ಸಂತಾನ ಅಭಿವೃದ್ಧಿ ಕಾರ್ಯವನ್ನು ಕೈಗೊಳ್ಳಲು ಮೈಸೂರು ವಿಭಾಗ, ಕೂರ್ಗಳ್ಳಿ ಮೀಸಲು ಅರಣ್ಯ ಸರ್ವೇ ನಂ. 137 ರಲ್ಲಿ 113.21 ಎಕರೆ ಅರಣ್ಯ ಜಮೀನನ್ನು ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ಮೃಗಾಲಯ ಪ್ರಾಧಿಕಾರ, ಮೈಸೂರು ಇವರಿಗೆ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:**

1. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರ ಪತ್ರ ಸಂಖ್ಯೆ: ಎ5(7)ಜಿಎಫ್ಎಲ್.ಸಿಆರ್.75/08–09,ದಿ:20.01.2009.
2. ಉಪ ಅರಣ್ಯ ಸಂರಕ್ಷಣಾಧಿಕಾರಿ, ಮೈಸೂರು ವಿಭಾಗ, ಮೈಸೂರು ರವರ ಪತ್ರ ಸಂಖ್ಯೆ: ಸಿ2/ಡಿಎಂಎನ್/ಸಿಆರ್–3/2008–09, ದಿನಾಂಕ:10.05.2010.
3. ಕಾರ್ಯನಿರ್ವಾಹಕ ನಿರ್ದೇಶಕರು, ಶ್ರೀ ಚಾಮರಾಜೇಂದ್ರ ಮೃಗಾಲಯ, ಮೈಸೂರು ರವರ ಪತ್ರ ಸಂ:ಎಂಜೆಡ್ಎ/1180/2011–12, ದಿನಾಂಕ:09.01.2012.

**ಪ್ರಸ್ತಾವನೆ:**

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರು ಕಾಡೆಮ್ಮೆಗಳ ಪ್ರದರ್ಶನ ನಿಷೇಧವನ್ನು ಸೃಷ್ಟಿಸಿ ಅವುಗಳ ಸಂರಕ್ಷಣೆ ಮತ್ತು ಸಂತಾನಾಭಿವೃದ್ಧಿ ಕಾರ್ಯವನ್ನು ಕೈಗೊಳ್ಳಲು ಮೈಸೂರು ವಿಭಾಗ ಕೂರ್ಗಹಳ್ಳಿ ಮೀಸಲು ಅರಣ್ಯಕ್ಕೆ ಸೇರಿದ ಕೂರ್ಗಹಳ್ಳಿ ಸರ್ವೆ ನಂ 137 ರಲ್ಲಿ 44.10 ಹೆ. ಹಾಗೂ ಬಸ್ತೀಪುರ ಮೀಸಲು ಅರಣ್ಯಕ್ಕೆ ಸೇರಿದ ಕೂರ್ಗಹಳ್ಳಿ ಗ್ರಾಮದ ಸರ್ವೆ ನಂ 136 ರಲ್ಲಿ 32.00 ಹೆ. ಹೀಗೆ ಒಟ್ಟು 76.10 ಹೆ. ಅರಣ್ಯ ಪ್ರದೇಶವನ್ನು ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ಮೃಗಾಲಯ ಪ್ರಾಧಿಕಾರ, ಮೈಸೂರು ಇವರಿಗೆ ಹಸ್ತಾಂತರಿಸುವ ಬಗ್ಗೆ ಮೇಲೆ ಓದಲಾದ (1)ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ ಮೈಸೂರು ವಿಭಾಗ ಇವರಿಗೆ ಪ್ರಸ್ತಾಪಿತ ಪ್ರದೇಶಗಳ ಸ್ಥಳ ಪರಿಶೀಲನೆ, ಮಾಡಿ ದಾಖಲೆಗಳನ್ನು ಸರಿಯಾಗಿ ಪರಿಶೀಲಿಸಿ ವರದಿಯನ್ನು ಸಲ್ಲಿಸುವಂತೆ ಸೂಚಿಸಿದ ಮೇರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ ಮೈಸೂರು ವಿಭಾಗ ಇವರು ಮೇಲೆ ಓದಲಾದ (2)ರಲ್ಲಿ ವರದಿ ಸಲ್ಲಿಸಿದ್ದು, ಸದರಿ ಯೋಜನೆಗೆ ಈ ಕೆಳಕಂಡ ಅರಣ್ಯ ಪ್ರದೇಶಗಳನ್ನು ಹಸ್ತಾಂತರಿಸಲು ಕೋರಿರುತ್ತಾರೆ.

| ಕ್ರ. ಸಂ. | ಜಿಲ್ಲೆ/ತಾಲ್ಲೂಕು | ಹೋಬಳಿ | ಗ್ರಾಮ | ಸರ್ವೆ ಸಂ | ವಿಸ್ತೀರ್ಣ ಎಕರೆ | ಷರಾ |
|---|---|---|---|---|---|---|
| 1 | ಮೈಸೂರು | ಇಲವಾಲ | ಕೂರ್ಗಳ್ಳಿ | 137 | 113.21 | ಕೂರ್ಗಳ್ಳಿ ಮೀಸಲು ಅರಣ್ಯ |
| 2 | | | | 136 | 29.16 | ನೆಡತೋಪು (ಜಿಲ್ಲಾ ಅರಣ್ಯ) |
| 3 | ಮಂಡ್ಯ/ ಶ್ರೀರಂಗಪಟ್ಟಣ | ಬೆಳಗೋಳ | ಬಸ್ತಿಪುರ | 38<br>37 | 43.21<br>3.02 | ನೆಡತೋಪು (ಜಿಲ್ಲಾ ಅರಣ್ಯ) |
| | | | ಮೈದನಹಳ್ಳಿ | 15 | 6.05 | ನೆಡತೋಪು (ಜಿಲ್ಲಾ ಅರಣ್ಯ) |
| | | | | **ಒಟ್ಟು** | **195.23** | |

ಪ್ರಸ್ತಾಪಿತ ಪ್ರದೇಶಗಳಲ್ಲಿ, ಮೈಸೂರು ವಿಭಾಗ, ಕೂರ್ಗಳ್ಳಿ ಸ.ನಂ. 137ರಲ್ಲಿ 113.21 ಎಕರೆ ಮೀಸಲು ಅರಣ್ಯ ಪ್ರದೇಶವಾಗಿದೆ. ಕೂರ್ಗಳ್ಳಿ ಸ.ನಂ.136, ಬಸ್ತಿಪುರ ಗ್ರಾಮದ ಸ.ನಂ.38,37 ಹಾಗೂ ಮೈದನಹಳ್ಳಿ ಸ.ನಂ.15ರಲ್ಲಿನ 29.16+43.21+3.02+6.05 = 82.04 ಎಕರೆ ಪ್ರದೇಶವು ಕಂದಾಯ ಇಲಾಖೆಗೆ ಸೇರಿದ ಗೋಮಾಳ ಪ್ರದೇಶದಲ್ಲಿ ಅರಣ್ಯ ಇಲಾಖೆಯವರಿಂದ ನೆಡುತೋಪು ಬೆಳೆಸಲಾಗಿರುತ್ತದೆ. ಆದ್ದರಿಂದ ಸದರಿ ಗೋಮಾಳ ಪ್ರದೇಶವು ಕಂದಾಯ ಇಲಾಖೆಯ ಒಡೆತನಕ್ಕೆ ಸೇರಿರುವುದರಿಂದ ಕಂದಾಯ ಇಲಾಖೆಯ ಅಭಿಪ್ರಾಯ ಕೋರಲಾಗಿತ್ತು.

ಕಂದಾಯ ಇಲಾಖೆಯು ಮೈಸೂರು ವಿಭಾಗ, ಕೂರ್ಗಹಳ್ಳಿ ಗ್ರಾಮದ ಸ.ನಂ.137 ರಲ್ಲಿ 113–21 ಎಕರೆ ವಿಸ್ತೀರ್ಣದ ಜಮೀನನ್ನು ಈಗಾಗಲೇ ಅರಣ್ಯ ಇಲಾಖೆಗೆ ಹಸ್ತಾಂತರಿಸಿರುವುದರಿಂದ, ಅದನ್ನು ಕಾಡೆಮ್ಮೆಗಳ ಸಂರಕ್ಷಣೆ ಮತ್ತು ಸಂತಾನಾಭಿವೃದ್ಧಿ ಕಾರ್ಯಕ್ಕಾಗಿ ಕರ್ನಾಟಕ ಮೃಗಾಲಯ ಪ್ರಾಧಿಕಾರಕ್ಕೆ ಹಸ್ತಾಂತರಿಸುವ ಕುರಿತಂತೆ ಅರಣ್ಯ ಇಲಾಖೆಯೇ ತೀರ್ಮಾನ ಕೈಗೊಳ್ಳಬಹುದೆಂದು ಅಭಿಪ್ರಾಯ ನೀಡಿದೆ.

ಮೇಲೆ ಓದಲಾದ (3)ರಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರು, ಶ್ರೀ ಚಾಮರಾಜೇಂದ್ರ ಮೃಗಾಲಯ, ಮೈಸೂರು ಸಹ ಮೈಸೂರು ಕೂರ್ಗಹಳ್ಳಿ ಗ್ರಾಮದ ಸ.ನಂ.137 ರಲ್ಲಿ 113–21 ಎಕರೆ ವಿಸ್ತೀರ್ಣದ ಜಮೀನನ್ನು ಹಸ್ತಾಂತರಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 22 ಎಫ್‌ಜಿಎಲ್ 2009, ಬೆಂಗಳೂರು, ದಿನಾಂಕ:21.07.2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಅರಣ್ಯ ಪ್ರದೇಶದಲ್ಲಿ ಪ್ರದರ್ಶನ ನಿಷೇಧವನ್ನು ಸೃಷ್ಟಿಸಿ ಭಾರತದ ಕಾಡೆಮ್ಮೆಗಳ ಸಂರಕ್ಷಣೆ ಮತ್ತು ಸಂತಾನ ಅಭಿವೃದ್ಧಿ ಕಾರ್ಯವನ್ನು ಕೈಗೊಳ್ಳಲು ಮೈಸೂರು ವಿಭಾಗ, ಕೂರ್ಗಳ್ಳಿ ಮೀಸಲು ಅರಣ್ಯ ಸರ್ವೆ ನಂ. 137 ರಲ್ಲಿ 113.21 ಎಕರೆ ಅರಣ್ಯ ಜಮೀನನ್ನು ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸದಸ್ಯ ಕಾರ್ಯದರ್ಶಿಗಳು, ಕರ್ನಾಟಕ ಮೃಗಾಲಯ ಪ್ರಾಧಿಕಾರ, ಮೈಸೂರು ಇವರಿಗೆ ಹಸ್ತಾಂತರಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಸಿ.ರಾಜಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಪಿ.ಆರ್. 1927**

## FOREST, ECOLOGY AND ENVIRONMENT SECRETARIAT

**Subject :** Diversion of 1.00 ha. of Reserve Forest land in Sy.No.164 in Kadgod village of Sirsi Taluk, Uttara Kannada District in Sirsi Division for construction of proposed 110/11 KV, 1x10 MVA Sub-Station in Banavasi in favour of the Executive Engineer (Elect), Major Works Division, Uttara Kannada District, KPTCL, Hubli.

**Read :**
1. Letter No.A5(2)GFL.CR.28/2011-12, dated 10/04/2012 of the Principal Chief Conservator of Forests, Bangalore.
2. Letter No.F.No.11.9/98-FC dated: 03-01-2005, 26-12-2007 and 11-09-2009 Guidelines of Government of India, Ministry of Environment and Forests, New Delhi.

**PREAMBLE:**

Principal Chief Conservator of Forests, Bangalore vide letter read at (1) above had submitted a proposal for diversion of 1.00 ha. of Reserve Forest land in Sy.No.164 in Kadgod village of Sirsi Taluk, Uttara Kannada District in Sirsi Division for construction of proposed 110/11 KV, 1x10 MVA Sub-Station in Banavasi in favour of the Executive Engineer (Elect), Major Works Division, Uttara Kannada District, KPTCL, Hubli subject to certain conditions.

Government of India, Ministry of Environment and Forests, New Delhi vide their letter dated: 03.01.2005 read at (2) above conveyed its general approval under Section 2 of the Forest (Conservation)Act, 1980 for diversion of forest land to Government Departments for certain activities not exceeding one ha.

This proposal has been examined in accordance with the general approval of Government of India vide letter dated: 03.01.2005 and it has been decided to accord approval of 1.00 ha. of Reserve Forest land in Sy.No.164 in Kadgod village of Sirsi Taluk, Uttara Kannada District in Sirsi Division for construction of proposed 110/11 KV, 1x10 MVA Sub-Station in Banavasi in favour of the Executive Engineer (Elect), Major Works Division, Uttara Kannada District, KPTCL, Hubli.

The proposal has been examined in detail and hence the order.

**GOVERNMENT ORDER NO. FEE 75 FGL 2012, BANGALORE, DATED:12/07/2012**

In the circumstances explained in the preamble and in accordance with the general approval of Government of India in the letters dated 03.01.2005 and 26.12.2007 and 11.09.2009, Government is pleased to accord approval under Section (2) of Forest (Conservation) Act 1980 for diversion of 1.00 ha. of Reserve Forest land in Sy.No.164 in Kadgod village of Sirsi Taluk, Uttara Kannada District in Sirsi Division for construction of proposed 110/11 KV, 1x10 MVA Sub-Station in Banavasi in favour of the Executive Engineer (Elect), Major Works Division, Uttara Kannada District, KPTCL, Hubli subject to the following conditions:

1. The legal status of forest land shall remain unchanged and it will continue to be as forest land.
2. The lessee shall pay lease rent as fixed by the Government from time to time.
3. The lease tenure is for Twenty (20) years.
4. The land shall be utilized for the purpose for which it is released.
5. The leased out area should be used for the purpose for which it is granted. In case the land is not used for the stipulated purpose within one year or when it is no longer needed for the stipulated purpose, the area should be resumed to the Forest Department under Section 82 of Karnataka Forest Act, 1963. The concerned Deputy Conservator of Forests is authorized to take necessary action in this regard.
6. No residential buildings shall be permitted in the proposed area.
7. The Karnataka Forest Act, 1963 and Rules, 1969 and other relevant Acts & Rules will be applicable for any violation.
8. Only minimum number of trees shall be cut based on actual requirement of the project, not exceeding 50(fifty) trees.
9. The User Agency shall pay the extraction and transmportation charges of trees as estimated by the Deputy Conservators of Forests from the proposed forest land.
10. Compensatory Afforestation shall be raised over 2.00 ha. of degraded forest area at the cost of User Agency at the rate prevailing at the time of approval (At present it is Rs. 1,52,000/- per ha.)
11. The User Agency has to pay the Net Present Value (NPV) of forest land diverted under this proposal as per Orders dated: 28-03-2008 and 09-05-2008 of the Hon`ble Supreme Court of India.
12. The User Agency shall ensure that there shall be no damage to the available fauna and flora.
13. Any damage to forest area due to such works shall be compensated by the User Agency. The extent of damage shall be assessed by the concerned Deputy Conservator of Forest.

14. The User Agency shall not sub-lease, mortgage and hypothecate the forest area.
15. The User Agency shall abide by all the conditions imposed upon by Government of India, the Government of Karnataka and Principal Chief Conservator of Forests (Head of Forest Force).

By Order and in the name of the Governor of Karnataka,

**H. C. RAJAPPA,**
Under Secretary to Government,
Forest, Ecology and Environment Department.

**P R 1945**

## FOREST, ECOLOGY AND ENVIRONMENT SECRETARIAT

**Subject :** Diversion of 0.86 ha. of forest land in Sy.No.92 and 93 of Nallur Village in Kaggali Kavalu Reserved Forest, Channarayapattana Range, Hassan District for providing drinking water to Arasikere Town from Hemavathy River in favour of the Executive Engineer, Karnataka Urban Water Supply and Drainage Board(KUWS&DB) Division Hassan.

**Read :**
1. Letter No.A5(2)GFL.CR.45/2010-11, dated 30/03/2012 of the Principal Chief Conservator of Forests, Bangalore.
2. Letter No.F.No.11.9/98-FC dated: 03-01-2005 26-12-2007 and 11-09-2009 Guidelines of Government of India, Ministry of Environment and Forests, New Delhi.

**PREAMBLE:**

Principal Chief Conservator of Forests, Bangalore vide letter read at (1) above had submitted a proposal for diversion of 0.86 ha. of forest land in Sy.No.92 and 93 of Nallur Village in Kaggali Kavalu Reserved Forest, Channarayapattana Range, Hassan District for providing drinking water to Arasikere Town from Hemavathy River in favour of the Executive Engineer, Karnataka Urban Water Supply and Drainage Board(KUWS&DB) Division, Hassan subject to certain conditions.

Government of India, Ministry of Environment and Forests, New Delhi vide their letter dated: 03.01.2005 read at (2) above conveyed its general approval under Section 2 of the Forest (Conservation)Act, 1980 for diversion of forest land to Government Departments for certain activities not exceeding one ha.

This proposal has been examined in accordance with the general approval of Government of India vide letter dated: 03.01.2005 and it has been decided to accord approval of 0.86 ha. of forest land in Sy.No.92 and 93 of Nallur Village in Kaggali Kavalu Reserved Forest, Channarayapattana Range, Hassan District for providing drinking water to Arasikere Town from Hemavathy River in favour of the Executive Engineer, Karnataka Urban Water Supply and Drainage Board(KUWS&DB) Division, Hassan.

The proposal has been examined in detail and hence the order.

### GOVERNMENT OREDR NO. FEE 59 FLL 2012, BANGALORE, DATED:28/06/2012

In the circumstances explained in the preamble and in accordance with the general approval of Government of India in the letters dated **03.01.2005 and 26.12.2007 and 11.09.2009,** Government is pleased to accord approval under Section (2) of Forest (Conservation) Act 1980 for diversion of 0.86 ha. of forest land in Sy.No.92 and 93 of Nallur Village in Kaggali Kavalu Reserved Forest, Channarayapattana Range, Hassan District for providing drinking water to Arasikere Town from Hemavathy River in favour of the Executive Engineer, Karnataka Urban Water Supply and Drainage Board(KUWS&DB) Division, Hassan subject to the following conditions:

1. The legal status of forest land shall remain unchanged and it shall continue to be forest land.
2. The lessee shall pay lease rent as fixed by the Government from time to time.
3. The lease tenure is for Twenty (20) years.

4. The leased out area should be used for the purpose for which it is granted. In case the land is not used for the stipulated purpose within one year or when it is no longer needed for the stipulated purpose, the area should be resumed to the Forest Department under Section 82 of Karnataka Forest Act,1963. The concerned Deputy Conservator of Forests is authorized to take necessary action in this regard.

5. No residential buildings shall be permitted in the proposed forest area.

6. The Karnataka Forest Act, 1963 and Rules, 1969 and other relevant Acts & Rules will be applicable for any violation.

**7.** The User Agency has to pay the Net Present Value(NPV) of forest land diverted under this proposal **as per Orders dated: 28-03-2008 and 09-05-2008 of the Hon`ble Supreme Court of India.**

8. The User Agency shall ensure that there shall be no damage to the available fauna and flora.

9. The opened trench shall be refilled properly after laying the pipeline and there shall not be any scope for soil erosion.

10. The User Agency shall not sub-lease, mortgage and hypothecate the forest area.

11. The User Agency shall abide by all the conditions imposed upon by Government of India, the Government of Karnataka and Principal Chief Conservator of Forests (Head of Forest Force).

By Order and in the name of the Governor of Karnataka,

**H. C. RAJAPPA,**
Under Secretary to Government,
Forest, Ecology and Environment Department.

**P R 1946**

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಎಸ್.ಕೆ. ರೇಣುಕ, ವಿಶೇಷ ತಹಶೀಲ್ದಾರ್, ಗ್ರೇಡ್–1, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರಿಗೆ ಮೊದಲನೇ ಸ್ಥಗಿತ ವೇತನ ಬಡ್ತಿ ಮಂಜೂರುಮಾಡುವ ಬಗ್ಗೆ.

**ಓದಲಾಗಿದೆ :** (1) ಶ್ರೀ ಎಸ್.ಕೆ. ರೇಣುಕ, ವಿಶೇಷ ತಹಶೀಲ್ದಾರ್, ಗ್ರೇಡ್–1, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ: ಸಿಬ್ಬಂದಿ(2)ಸಿಆರ್/525/2007–08 ದಿನಾಂಕ: 30–4–2012 ಮತ್ತು ಪತ್ರ ದಿನಾಂಕ: 3–7–2012.

(2) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರ ಪತ್ರ ಸಂಖ್ಯೆ: GE I/R2/Vol/729/ 485286 ದಿನಾಂಕ: 22–6–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ದಿನಾಂಕ: 30–4–2012 ಮತ್ತು 3–7–2012 ರ ಪತ್ರಗಳಲ್ಲಿ, ಶ್ರೀ ಎಸ್.ಕೆ. ರೇಣುಕ, ವಿಶೇಷ ತಹಶೀಲ್ದಾರ್, ಗ್ರೇಡ್–1, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ವೇತನವು ವೇತನ ಶ್ರೇಣಿ ರೂ. 11400–21600 ರಲ್ಲಿ ದಿನಾಂಕ: 1–2–2011 ರಂದು ವೇತನ ಶ್ರೇಣಿಯ ಗರಿಷ್ಠ ಹಂತವನ್ನು (ರೂ. 21,600/–) ತಲುಪಿದ್ದು, ದಿನಾಂಕ: 1–2–2012 ರಿಂದ ಲಭ್ಯವಾಗಬೇಕಾಗಿದ್ದ ವಾರ್ಷಿಕ ವೇತನ ಬಡ್ತಿ ಸ್ಥಗಿತವಾಗಿರುವ ಕಾರಣ, ದಿನಾಂಕ: 1–2–2012 ರಿಂದ ಅನ್ವಯವಾಗುವಂತೆ ರೂ. 525/– ಗಳ (21600 + ಪ್ರಥಮ ಸ್ಥಗಿತ ವೇತನ ರೂ. 525/–) ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ದಿನಾಂಕ: 22–6–2012 ರ ಪತ್ರದಲ್ಲಿ, ಮಹಾಲೇಖಪಾಲರು ಶ್ರೀ ಎಸ್.ಕೆ. ರೇಣುಕ, ವಿಶೇಷ ತಹಶೀಲ್ದಾರ್, ಗ್ರೇಡ್–1, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ರವರು ವೇತನ ಶ್ರೇಣಿ ರೂ. 11,400–21,600 ರಲ್ಲಿ ದಿನಾಂಕ: 1–2–2012 ಕ್ಕೆ ರೂ. 21,600/– ಗರಿಷ್ಠ ವೇತನವನ್ನು ತಲುಪಿದ್ದು, ಅವರಿಗೆ ಮೊದಲನೇ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮಹಾಲೇಖಪಾಲರ ಪತ್ರದ ಹಿನ್ನಲೆಯಲ್ಲಿ, ಶ್ರೀ ಎಸ್.ಕೆ. ರೇಣುಕ, ವಿಶೇಷ ತಹಶೀಲ್ದಾರ್, ಗ್ರೇಡ್–1, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ರವರಿಗೆ ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 204 ಎಎಸ್‌ಡಿ 2012, ಬೆಂಗಳೂರು ದಿನಾಂಕ: 20–7–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ಎಸ್.ಕೆ. ರೇಣುಕ, ವಿಶೇಷ ತಹಶೀಲ್ದಾರ್, ಗ್ರೇಡ್–1, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ರವರಿಗೆ ವೇತನ ಶ್ರೇಣಿ ರೂ. 11,400–21,600 ರಲ್ಲಿ ದಿನಾಂಕ: 1–2–2011 ಕ್ಕೆ ರೂ. 21,600/– ಗರಿಷ್ಠ ವೇತನವನ್ನು ತಲುಪಿದ್ದು, ದಿನಾಂಕ: 1–2–2012 ರಿಂದ ಅನ್ವಯವಾಗುವಂತೆ ರೂ. 525/– ಗಳ (21,600 + ಪ್ರಥಮ ಸ್ಥಗಿತ ರೂ. 525/–) ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 1958**

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ವಿ.ಬಿ. ಫರ್ನಾಂಡೀಸ್, ತಹಶೀಲ್ದಾರ್, ಕುಮಟಾ ಇವರಿಗೆ ಮೊದಲನೇ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** (1) ಶ್ರೀ ವಿ.ಬಿ. ಫರ್ನಾಂಡೀಸ್, ತಹಶೀಲ್ದಾರ್, ಕುಮಟಾ ಇವರ ಮನವಿ ಪತ್ರ ದಿನಾಂಕ: 16–4–2012.

(2) ಉತ್ತರ ಕನ್ನಡ ಜಿಲ್ಲಾಧಿಕಾರಿಯವರ ಪತ್ರ ಸಂಖ್ಯೆ: ಕಂಶಾ/ಸಿಬ್ಬಂದಿ(1)/ವಿವ–02/2012–13 ದಿನಾಂಕ: 6–6–2012

(3) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರ ಪತ್ರ ಸಂಖ್ಯೆ: GE I/R3/1649 ದಿನಾಂಕ: 13–2–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1) ದಿನಾಂಕ: 16–4–2012 ರ ಪತ್ರದಲ್ಲಿ, ಶ್ರೀ ವಿ.ಬಿ. ಫರ್ನಾಂಡೀಸ್, ತಹಶೀಲ್ದಾರ್, ಕುಮಟಾ ರವರು ವೇತನವನ್ನು ವೇತನ ಶ್ರೇಣಿ ರೂ. 11,400–21,600 ರಲ್ಲಿ ಪಡೆಯುತ್ತಿದ್ದು, ದಿನಾಂಕ: 1–12–2010 ರಂದು ವೇತನ ಶ್ರೇಣಿಯ ಗರಿಷ್ಠ ಹಂತ ರೂ. 21,600/– ತಲುಪಿದ್ದು, ದಿನಾಂಕ: 1–12–2011 ರಿಂದ ಅನ್ವಯವಾಗುವಂತೆ ಲಭ್ಯವಾಗಬೇಕಾಗಿದ್ದ ವಾರ್ಷಿಕ ವೇತನ ಬಡ್ತಿಯು ಸ್ಥಗಿತವಾಗಿರುವುದರಿಂದ, ದಿನಾಂಕ: 1–12–2011 ರಿಂದ ಅನ್ವಯವಾಗುವಂತೆ ರೂ. 525/– ಗಳ (21,600 + ಪ್ರಥಮ ಸ್ಥಗಿತ ರೂ. 525/–) ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ದಿನಾಂಕ: 6–6–2012 ರ ಪತ್ರದಲ್ಲಿ, ಉತ್ತರ ಕನ್ನಡ ಜಿಲ್ಲಾಧಿಕಾರಿಯವರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 3 ಎಫ್‌ಆರ್‌ಡಿ 96 ದಿನಾಂಕ: 18–3–1996 ರನ್ವಯ ಸರ್ಕಾರಿ ನೌಕರರು ತಮ್ಮ ಸೇವಾ ಅವಧಿಯಲ್ಲಿ ಒಟ್ಟು 5 ವಾರ್ಷಿಕ ಸ್ಥಗಿತ ವೇತನ ಬಡ್ತಿಗಳನ್ನು ಪಡೆಯಬಹುದಾಗಿದ್ದು, ಗರಿಷ್ಠ ವೇತನ ತಲುಪಿದ ದಿನಾಂಕದಿಂದ 1 ವರ್ಷ ಪೂರ್ಣಗೊಂಡ ದಿನಾಂಕ ಅಥವಾ ಹಿಂದಿನ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡಿದ ದಿನಾಂಕದಿಂದ ಒಂದು ವರ್ಷ ಪೂರ್ಣಗೊಂಡ ಅವಧಿಗೆ ಅನ್ವಯವಾಗುವಂತೆ ಸ್ಥಗಿತ ವೇತನ ಬಡ್ತಿಗಳನ್ನು ಮಂಜೂರು ಮಾಡಬಹುದಾಗಿದ್ದು, ಶ್ರೀ ವಿ.ಬಿ. ಫರ್ನಾಂಡೀಸ್, ತಹಶೀಲ್ದಾರ್, ಕುಮಟಾ ಇವರ ವೇತನ ಶ್ರೇಣಿ ರೂ. 11,400 – 21,600 ಇದ್ದು, ಅವರ ಸೇವೆ ತೃಪ್ತಿಕರವಾಗಿದ್ದು, ಅವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲವಾದ ಪ್ರಯುಕ್ತ ಅವರಿಗೆ ದಿನಾಂಕ: 1–12–2011 ರಿಂದ ಅನ್ವಯವಾಗುವಂತೆ ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ರ ದಿನಾಂಕ: 13–2–2012 ರ ಪತ್ರದಲ್ಲಿ, ಮಹಾಲೇಖಪಾಲರು ಶ್ರೀ ವಿ.ಬಿ. ಫರ್ನಾಂಡೀಸ್, ತಹಶೀಲ್ದಾರ್, ಕುಮಟಾ ರವರು ವೇತನ ಶ್ರೇಣಿ ರೂ. 11,400–21,600 ರಲ್ಲಿ ದಿನಾಂಕ: 1–12–2010 ಕ್ಕೆ ರೂ. 21,600/– ಗರಿಷ್ಠ ವೇತನವನ್ನು ತಲುಪಿದ್ದು, ಅವರಿಗೆ ಮೊದಲನೇ ಸ್ಥಗಿತ ವೇತನ ಬಡ್ತಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ ಮತ್ತು ಮಹಾಲೇಖಪಾಲರ ಪತ್ರಗಳ ಹಿನ್ನಲೆಯಲ್ಲಿ, ಶ್ರೀ ವಿ.ಬಿ. ಫರ್ನಾಂಡೀಸ್, ತಹಶೀಲ್ದಾರ್, ಕುಮಟಾ ರವರಿಗೆ ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 236 ಎಎಸ್‌ಡಿ 2012, ಬೆಂಗಳೂರು ದಿನಾಂಕ: 3–7–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ವಿ.ಬಿ. ಫರ್ನಾಂಡೀಸ್, ತಹಶೀಲ್ದಾರ್, ಕುಮಟಾ ರವರಿಗೆ ವೇತನ ಶ್ರೇಣಿ ರೂ. 11,400–21,600 ರಲ್ಲಿ ದಿನಾಂಕ: 1–12–2010 ಕ್ಕೆ ರೂ. 21,600/– ಗರಿಷ್ಠ ವೇತನವನ್ನು ತಲುಪಿದ್ದು, ದಿನಾಂಕ: 1–12–2011 ರಿಂದ ಅನ್ವಯವಾಗುವಂತೆ ರೂ. 525/– ಗಳ (21,600 + ಪ್ರಥಮ ಸ್ಥಗಿತ ರೂ. 525/–) ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 1961**

## ಕಂದಾಯ ಸಚಿವಾಲಯ

**ವಿಷಯ** : ಶ್ರೀ.ಮಹಮದ್ ಫಯಾಜ್ ಅಲಿ, ನಿವೃತ್ತ ತಹಶೀಲ್ದಾರ್, ಬಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ, ಇವರ ವಿರುದ್ಧದ ಶಿಸ್ತು ಕ್ರಮ ಕುರಿತು.

**ಓದಲಾಗಿದೆ** :

1) ರಾಜ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 1630/1992 ದಿನಾಂಕ:30.07.1992(114)
2) ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಹೂಡಲಾದ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ:1275/1992 ದಿನಾಂಕ:23.02.1993 (111) ಮತ್ತು 02.04.1993(110)
3) ರಾಜ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 18012/1989, 21713/1994, 26317–19/1993 ಮತ್ತು 20415/1994 ದಿನಾಂಕ:27.01.1995 (124)
4) ಜಿಲ್ಲಾಧಿಕಾರಿ, ರಾಯಚೂರು ಅವರ ಪತ್ರದ ಸಂಖ್ಯೆ:ಕಂದಾಯ/ಎಂಎಎಸ್‌ಸಿ/195/1995–96 ದಿನಾಂಕ:27.04.1996(39)
5) ಜಿಲ್ಲಾಧಿಕಾರಿ, ಧಾರವಾಡ ಅವರ ಪತ್ರ ಸಂಖ್ಯೆ:ಸಿಬ್ಬಂದಿ/02/ವಹಿ/273/1995–96 ದಿನಾಂಕ:17.05.1996(40)
6) ಜಿಲ್ಲಾಧಿಕಾರಿ, ಬೀದರ್ ಅವರ ಪತ್ರ ಸಂಖ್ಯೆ:ಆರ್‌ಇವಿ/ಇಎಸ್‌ಟಿ/ಇಎನ್‌ಓ/ಸಿಆರ್ /22/ 1995–96 ದಿನಾಂಕ:13.06.1996.(80)
7) ಜಿಲ್ಲಾಧಿಕಾರಿ, ಕೋಲಾರ ಅವರ ಪತ್ರ ಸಂಖ್ಯೆ: ಎಂ.ಎ.ಜಿ(4)/ಎ.ಆರ್/368/1995–96 ದಿನಾಂಕ:07.06.1996
8) ಸರ್ಕಾರದ ಆದೇಶ ಸಂಖ್ಯೆ: ಕಂಇ 05 ಎಡಿಇ 1996 ದಿನಾಂಕ:19.06.1996.(62)
9) ಜಿಲ್ಲಾಧಿಕಾರಿ ಗುಲ್ಬರ್ಗಾ ಅವರ ಪತ್ರ ಸಂಖ್ಯೆ:ಕಂ/ಸಂಕೀರ್ಣ/634/1995–96 ದಿನಾಂಕ:24.06.1996(89)
10) ಕರ್ನಾಟಕ ರಾಜ್ಯ ಕಂದಾಯ ಇಲಾಖಾ ನೌಕರರ ಸಂಘ, ಅವರ ಪತ್ರ ದಿನಾಂಕ:21.06.1996(84)
11) ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರ ಪತ್ರ ಸಂಖ್ಯೆ:ಸಿಬ್ಬಂದಿ.ಸಿ.ಆರ್.36/1996–97 ದಿನಾಂಕ:29.06.1996 (141)
12) ಸಹಾಯಕ ಆಯುಕ್ತರು, ಕೊಪ್ಪಳ ಅವರ ಪತ್ರ ಸಂಖ್ಯೆ:ಕಂ.ಮಿಶ್ರ.16.95–96 ದಿನಾಂಕ:01.07.1996(144)
13) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ:3628/1996 ಹಾಗೂ 3641 ರಿಂದ 3643/1996 ದಿನಾಂಕ:25 ಮತ್ತು 26 ಜೂನ್ 1996 (349)
14) ಸರ್ಕಾರದ ಆದೇಶ ಸಂಖ್ಯೆ: ಕಂಇ 05 ಎಡಿಇ 1996 ದಿನಾಂಕ:26.07.1996.(209)
15) ಸರ್ಕಾರದ ಆದೇಶ ಸಂಖ್ಯೆ: ಕಂಇ 05 ಎಡಿಇ 1996 ದಿನಾಂಕ:11.09.1996.(273)
16) ಸಮಾಜ ಕಲ್ಯಾಣ ಇಲಾಖೆ ಸುತ್ತೋಲೆ ಸಂಖ್ಯೆ:ಎಸ್.ಡಬ್ಲ್ಯೂ.ಡಿ.328/ಎಸ್.ಎ.ಡಿ ದಿನಾಂಕ:05.10.1995 (310)
17) ಜಿಲ್ಲಾಧಿಕಾರಿ ಗುಲ್ಬರ್ಗಾ ಅವರ ಪತ್ರ ಸಂಖ್ಯೆ:ಕಂ/ಸಂಕೀರ್ಣ/634/1996–97 ದಿನಾಂಕ:23.07.1996(343)
18) ಜಿಲ್ಲಾಧಿಕಾರಿ, ಬೀದರ್ ಅವರ ಪತ್ರ ಸಂಖ್ಯೆ:ಸಿಬ್ಬಂದಿ/ವಿಚಾರಣೆ/ಜಿ.ಎ./22/1995–96 ದಿನಾಂಕ:06.12.1996.(391)
19) ಜಿಲ್ಲಾಧಿಕಾರಿ, ಕೋಲಾರ ಅವರ ಪತ್ರ ಸಂಖ್ಯೆ:ಸಿ.ಸಿ.ಎ/ಸಿಆರ್/37/1996–97 ದಿನಾಂಕ:27.12.1996(404)

20) ಜಿಲ್ಲಾಧಿಕಾರಿ ಗುಲ್ಬರ್ಗಾ ಅವರ ಪತ್ರ ಸಂಖ್ಯೆ:ಕಂ/ಸಂಕೀರ್ಣ/634/1995–96 ದಿನಾಂಕ:04.03.1997(424)

21) ಜಿಲ್ಲಾಧಿಕಾರಿ, ರಾಯಚೂರು ಅವರ ಪತ್ರ ಸಂಖ್ಯೆ:ಕಂದಾಯ/ಎಂ.ಎಸ್.ಸಿ/195/1995–96 ದಿನಾಂಕ:11.06.1996.(438)

22) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ:ಆರ್‌ಡಿ 5 ಎಡಿಇ 1996 ದಿನಾಂಕ:27.01.1998(464 ರಿಂದ)

23) ಸರ್ಕಾರಿ ಪತ್ರ ಸಂಖ್ಯೆ: ಆರ್‌ಡಿ 5 ಎಡಿಇ 1996 ದಿನಾಂಕ: 06.08.1998(504)

24) ಸರ್ಕಾರಿ ಪತ್ರದ ಸಂಖ್ಯೆ:ಕಂಇ 5 ಎಡಿಇ 1996 ದಿನಾಂಕ:13.08.1998 (508)

25) ಜಿಲ್ಲಾಧಿಕಾರಿ, ರಾಯಚೂರು ಅವರ ಪತ್ರ ಸಂಖ್ಯೆ:ಕಂದಾಯ/ಎಂ.ಎಸ್.ಸಿ./40/ 1996–97 ದಿನಾಂಕ:25.09.1998

26) ಜಿಲ್ಲಾಧಿಕಾರಿ, ಗದಗ್ ಅವರ ಪತ್ರ ಸಂಖ್ಯೆ:ಸಿಬ್ಬಂದಿ/ವಹಿ/161/1998–99 ದಿನಾಂಕ:26.11.1998(517)

27) ಸರ್ಕಾರಿ ಪತ್ರದ ಸಂಖ್ಯೆ:ಕಂಇ 5 ಎಡಿಇ 1996 ದಿನಾಂಕ:30.03.1999 (521)

28) ಜಿಲ್ಲಾಧಿಕಾರಿ, ಕೊಪ್ಪಳ ಅವರ ಪತ್ರ ಸಂಖ್ಯೆ:ಕಂ/ಸಿಬ್ಬಂದಿ/1/1998–1999 ದಿನಾಂಕ:28.04.1999 ಹಾಗೂ 23.02.2000(589)

29) ಸರ್ಕಾರಿ ಆದೇಶ ಸಂಖ್ಯೆ:ಕಂಇ 5 ಎಡಿಇ 1996 ದಿನಾಂಕ:13.06.2000(628)

30) ಸರ್ಕಾರಿ ಪತ್ರದ ಸಂಖ್ಯೆ:ಕಂಇ 5 ಎಡಿಇ 1996(1) ದಿನಾಂಕ:16.08.2004 (652)

31) ಸರ್ಕಾರಿ ಪತ್ರದ ಸಂಖ್ಯೆ:ಕಂಇ 5 ಎಡಿಇ 1996(1) ದಿನಾಂಕ:16.08.2004 (653)

32) ಸರ್ಕಾರಿ ಪತ್ರದ ಸಂಖ್ಯೆ:ಕಂಇ 5 ಎಡಿಇ 1996 ದಿನಾಂಕ:10.05.2005 (686)

33) ಸರ್ಕಾರಿ ಪತ್ರದ ಸಂಖ್ಯೆ:ಕಂಇ 5 ಎಡಿಇ 1996 ದಿನಾಂಕ:08.11.2006 ಮತ್ತು 18.12.2006 (700–698)

34) ಕೋಲಾರ ಜಿಲ್ಲಾಧಿಕಾರಿಯವರ ಆದೇಶ ಸಂಖ್ಯೆ:ಸಿಸಿಎ /ಸಿಆರ್/37/96–97, ದಿನಾಂಕ: 19.05.2005 (710–711)

35) ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಅ.ಸ.ಪ. ಸಂಖ್ಯೆ:ಕಂಇ 5 ಎಡಿಇ 1996 ದಿನಾಂಕ:30.05.2007.

36) ಸರ್ಕಾರದ ನೋಟೀಸು ಸಂಖ್ಯೆ: ಆರ್‌ಡಿ 60 ಎಡಿಇ 2010 ದಿನಾಂಕ:29.01.2011.

37) ಶ್ರೀ ಮಹಮದ್ ಫಯಾಜ್ ಅಲಿ ಇವರ ಸಮಜಾಯಿಸಿ ದಿನಾಂಕ: 15.09.2011

**ಪ್ರಸ್ತಾವನೆ:–**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ರಿಟ್ ಅರ್ಜಿಯಲ್ಲಿ ತಹಶೀಲ್ದಾರ್, ಕೊಪ್ಪಳ ಅವರು ಬೇಡ ಜಂಗಮದವರಿಗೆ ಸೇರಿದ ಅಭ್ಯರ್ಥಿಗಳಿಗೆ ಪರಿಶಿಷ್ಟ ಜಾತಿ ಪ್ರಮಾಣ ಪತ್ರ ನೀಡಲು ಅವಕಾಶವಿಲ್ಲವೆಂದು ನೀಡಲಾದ ಹಿಂಬರಹಕ್ಕೆ ತಡೆಯಾಜ್ಞೆ ನೀಡಿ ಕೊಪ್ಪಳ್ ತಹಶೀಲ್ದಾರ್ ಅವರು ಜಾತಿ ಪ್ರಮಾಣ ಪತ್ರ ವಿತರಿಸಲು ಆದೇಶಿಸಿರುತ್ತದೆ.

ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ನ್ಯಾಯಾಲಯ ನಿಂದನಾ ಅರ್ಜಿಯಲ್ಲಿ ಬೇಡ ಜಂಗಮದವರಿಗೆ ಸೇರಿದ ಅಭ್ಯರ್ಥಿಗಳಿಗೆ ಪರಿಶಿಷ್ಟ ಜಾತಿ ಪ್ರಮಾಣ ಪತ್ರ ನೀಡದ ತಹಶೀಲ್ದಾರರ ವಿರುದ್ಧ ಏಕೆ ಕ್ರಮ ಜರುಗಿಸಬಾರದು ಹಾಗೂ ನ್ಯಾಯಾಲಯದ ಆದೇಶದಂತೆ ಪ್ರಮಾಣ ಪತ್ರವನ್ನು ದಿನಾಂಕ:13.04.1993 ರೊಳಗಾಗಿ ನೀಡಿ ತಹಶೀಲ್ದಾರರು ಖುದ್ದಾಗಿ ಹಾಜರಾಗಲು ಆದೇಶವಾಗಿರುತ್ತದೆ.

ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ರಿಟ್ ಅರ್ಜಿಯಲ್ಲಿ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನದಂತೆ ಅರ್ಜಿದಾರರ ಮನವಿಗಳನ್ನು ಕ್ರಮ ಜರುಗಿಸಲು ಆದೇಶಿಸಲಾಗಿರುತ್ತದೆ. ಸರ್ಕಾರದ ಪತ್ರದ ಸಂಖ್ಯೆ:ಆರ್‌ಡಿ 5 ಎಡಿಇ 96 ದಿನಾಂಕ:11.01.1996 ರಂದು ಜಾತಿ ಪ್ರಮಾಣ ಪತ್ರಗಳನ್ನು ನೀಡುವುದರಲ್ಲಿ ಅನುಸರಿಬೇಕಾದ ಕಾರ್ಯವಿಧಾನವನ್ನು ಅನುಸರಿಸದೆ ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿದ ಅಧಿಕಾರಿ ಮತ್ತು ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಉದ್ದೇಶಿಸಿ ಸುಳ್ಳು ಜಾತಿ ಪ್ರಮಾಣ ಪತ್ರ ವಿತರಿಸಲು ಕಾರಣರಾಗಿರುವ ಅಧಿಕಾರಿ /ನೌಕರರ ಹೆಸರು ಮುಂತಾದ ವಿವರಗಳನ್ನು ಕಳುಹಿಸಲು ಕೋರಲಾಗಿತ್ತು.

ಮೇಲೆ ಕ್ರಮಸಂಖ್ಯೆ (4)ರ ಪತ್ರದಲ್ಲಿ ಜಿಲ್ಲಾಧಿಕಾರಿ, ರಾಯಚೂರು, ಅವರು ಕೊಪ್ಪಳ ತಾಲ್ಲೂಕು ಮತ್ತು ಲಿಂಗಸೂಗೂರು ತಾಲ್ಲೂಕುಗಳಲ್ಲಿ ಸುಳ್ಳು ಜಾತಿ ಪ್ರಮಾಣ ಪತ್ರ ನೀಡಲು ಕಾರಣಕರ್ತರಾದ ಅಧಿಕಾರಿ ಹಾಗೂ ನೌಕರರ ವಿವರವನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮಸಂಖ್ಯೆ (5)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಧಾರವಾಡ, ಅವರು ಗದಗ್ ತಾಲ್ಲೂಕಿನಲ್ಲಿ ಸುಳ್ಳು ಜಾತಿ ಪ್ರಮಾಣ ಪತ್ರ ನೀಡಲು ಕಾರಣಕರ್ತರಾದ ಅಧಿಕಾರಿ ಹಾಗೂ ನೌಕರರ ವಿವರವನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (6)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಬೀದರ್, ಅವರು ಬಾಲ್ಕಿ ತಾಲ್ಲೂಕಿನಲ್ಲಿ ಸುಳ್ಳು ಜಾತಿ ಪ್ರಮಾಣ ಪತ್ರ ನೀಡಲು ಕಾರಣಕರ್ತರಾದ ಅಧಿಕಾರಿ ಹಾಗೂ ನೌಕರರ ವಿವರವನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ

ಮೇಲೆ ಓದಲಾದ ಕ್ರಮಸಂಖ್ಯೆ (7)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಕೋಲಾರ, ಅವರು ಬಂಗಾರಪೇಟೆ ತಾಲ್ಲೂಕಿನಲ್ಲಿ ಸುಳ್ಳು ಜಾತಿ ಪ್ರಮಾಣ ಪತ್ರ ನೀಡಲು ಕಾರಣಕರ್ತರಾದ ಅಧಿಕಾರಿ ಹಾಗೂ ನೌಕರರ ವಿವರವನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (8)ರ ಆದೇಶದಲ್ಲಿ ಸುಳ್ಳು ಜಾತಿ ಪ್ರಮಾಣ ಪತ್ರ ವಿತರಿಸಲು ಕಾರಣರಾದ 14 ಅಧಿಕಾರಿ ಹಾಗೂ ನೌಕರರನ್ನು ಅವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕಾಯ್ದಿರಿಸಿ ಅಮಾನತ್ತಿಲ್ಲಿಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (9)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಗುಲ್ಬರ್ಗಾ ಅವರು ಪತ್ರ ಬರೆದು ಶ್ರೀ.ಕೆ.ಪಿ.ಹೊನ್ನಕೇರಿ, ಮತ್ತು ಶ್ರೀ.ಟಿ.ಎನ್.ಶೆಡೋಳೆ ಅವರು ತಹಶೀಲ್ದಾರ್ ಆಗಿ ಸೇವೆ ಸಲ್ಲಿಸುತ್ತಿದ್ದಾಗ ಯಾವುದೇ ಬೇಡ ಜಂಗಮ ಪಂಗಡಕ್ಕೆ ಸೇರಿದವರಿಗೆ ಜಾತಿ ಪ್ರಮಾಣ ಪತ್ರ ನೀಡಿರುವುದಿಲ್ಲ. ಆ ಸಂಬಂಧ ಶ್ರೀ.ಸದಾಶಿವ, ವಿಶಾಲ್ ಜೆರಾಕ್ಸ್ ಸೆಂಟರ್, ಗುಲ್ಬರ್ಗಾ ಅವರು ಜಾತಿ ಸರ್ಟಿಫಿಕೇಟ್ ಫೋರ್ಜರಿ ಮಾಡಿದ ಆರೋಪದ ಮೇರೆಗೆ ಬ್ರಹ್ಮಪುರ ಪೋಲೀಸ್ ಠಾಣೆಯಲ್ಲಿ ಪಿರ್ಯಾದು ಆಗಿರುತ್ತದೆ ಮತ್ತು ತಹಶೀಲ್ದಾರರ ಸಹಿ ಫೋರ್ಜರಿ ಸಹಿಯಾಗಿರುತ್ತದೆ ಎಂದು ಸಲ್ಲಿಸಿರುವ ವರದಿಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (10) ರ ಮನವಿ ಪತ್ರದಲ್ಲಿ ಜಾತಿ ಮತ್ತು ಆದಾಯ ಪತ್ರ ನೀಡುವ ಕೆಲಸವು ಮೂಲತಃ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದ್ದು, ದೃಡೀಕರಣ ಪತ್ರ ಕಂದಾಯ ಇಲಾಖೆ ನೀಡಿದರೂ, ಅಂತಿಮವಾಗಿ ಸಿಂಧುತ್ವ ದೃಢೀಕರಣ ಪತ್ರವನ್ನು ಸಮಾಜ ಕಲ್ಯಾಣ ಇಲಾಖೆಯೇ ಮಾಡುತ್ತದೆ. ಆ ಹಿನ್ನೆಲೆಯಲ್ಲಿ ಸರ್ಕಾರ ಅಮಾನತ್ತು ಗೊಳಿಸಿರುವ ಕಂದಾಯ ಇಲಾಖೆಯ ವಿವಿಧ ವೃಂದಗಳ ಅಧಿಕಾರಿ/ಸಿಬ್ಬಂದಿ ವರ್ಗದವರ ಅಮಾನತ್ತನ್ನು ಹಿಂದಕ್ಕೆ ಪಡೆಯಲು ಕೋರಿರುತ್ತದೆ.

ಮೇಲೆ ಓದಲಾದ ಕ್ರಮಸಂಖ್ಯೆ (11) ರಲ್ಲಿ ಬೆಂಗಳೂರು ನಗರ ಜಿಲ್ಲಾಧಿಕಾರಿಯವರು ಶ್ರೀ ವೈ.ಆರ್.ರಂಗನಾಥರಾವ್, ಪ್ರಥಮ ದರ್ಜೆ ಸಹಾಯಕರವರನ್ನು ಬೆಂಗಳೂರು ನಗರ ಜಿಲ್ಲಾಧಿಕಾರಿಯವರ ಕಛೇರಿಯಲ್ಲಿ 3 ವರ್ಷಗಳಿಂದ ನಿಷ್ಠೆಯಿಂದ ಕಾರ್ಯ ನಿರ್ವಹಿಸುತ್ತಿದ್ದು, ಸಿಬ್ಬಂದಿ ಕೊರತೆಯಿರುವುದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಅವರ ಅಮಾನತ್ತನ್ನು ತೆರವುಗೊಳಿಸಿ ಈ ಹಿಂದೆ ಸೇವೆ ಸಲ್ಲಿಸುತ್ತಿದ್ದ ಸ್ಥಳದಲ್ಲಿಯೇ ಮುಂದುವರೆಸಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (12) ರ ಪತ್ರದಲ್ಲಿ ಶ್ರೀ ಶೇಖರಯ್ಯರವರು ಜಾತಿ ಪ್ರಮಾಣ ಪತ್ರ ನೀಡುವಾಗ ಅವರು ಶಿಫಾರಸ್ಸು ಮಾಡಿರಲಿಲ್ಲವೆಂದು ಹಾಗೂ ಆ ಗ್ರಾಮದ ಗ್ರಾಮಲೆಕ್ಕಿಗರಾಗಿರಲಿಲ್ಲವೆಂದು ತಿಳಿಸಿರುತ್ತಾರೆ ಅಲ್ಲದೇ ಪ್ರಮಾಣ ಪತ್ರಕ್ಕೆ ಯಾವ ಗ್ರಾಮಲೆಕ್ಕಿಗರ ಶಿಫಾರಸ್ಸು ಇಲ್ಲದಿರುವುದರಿಂದ ಶ್ರೀ ಶೇಖರಯ್ಯರವರ ಅಮಾನತ್ತಿನ ಆದೇಶವನ್ನು ರದ್ದುಗೊಳಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (13) ರ ಅರ್ಜಿಗಳಲ್ಲಿ ಆಡಳಿತ ನ್ಯಾಯ ಮಂಡಳಿಯು ತೀರ್ಪು ಮಾಡಿ ಅಮಾನತ್ತುಗೊಂಡಿರುವ ಅರ್ಜಿದಾರರ ಮನವಿಯನ್ನು ಪರಿಶೀಲಿಸಿ 15 ದಿನಗಳ ಒಳಗಾಗಿ ನಿರ್ಣಯವನ್ನು ತೆಗೆದುಕೊಳ್ಳಲು ಆದೇಶಿಸಿರುತ್ತದೆ.

ಮೇಲೆ ಓದಲಾದ ಕ್ರಮಸಂಖ್ಯೆ (14) ಮತ್ತು(15) ರ ಸರ್ಕಾರಿ ಆದೇಶಗಳಲ್ಲಿ ಅಮಾನತ್ತುಗೊಂಡ ಅಧಿಕಾರಿ/ನೌಕರರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಕೆಲಸಕ್ಕೆ ತೆಗೆದುಕೊಳ್ಳಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (16) ರ ಸುತ್ತೋಲೆಯಲ್ಲಿ ಬೇಡಜಂಗಮ, ಬುಡ್ಗ ಜಂಗಮ ಇತ್ಯಾದಿ ಜಾತಿಗಳವರಿಗೆ ಸಾಮಾಜಿಕ ಸ್ಥಾನಮಾನ ನೀಡುವ ಕುರಿತು ರಾಜ್ಯಮಟ್ಟದ ಪರಿಶೀಲನಾ ಸಮಿತಿ ಸಭೆಯನ್ನು ರಚಿಸಲಾಗಿದೆ ಹಾಗೂ ತಹಶೀಲ್ದಾರರು ಈ ಜನಾಂಗದವರಿಗೆ ಪ್ರಮಾಣ ಪತ್ರಗಳನ್ನು ವಿತರಿಸಿರುವಾಗ ಭಾರತ ಸರ್ಕಾರದ ಮಾರ್ಗಸೂಚಿಗಳನ್ನು ಪಾಲಿಸಿ ಅರ್ಹರಿಗೆ ಮಾತ್ರ ಪ್ರಮಾಣ ಪತ್ರಗಳನ್ನು ವಿತರಿಸಲು ಆದೇಶಿಸಿರುತ್ತದೆ.

ಮೇಲೆ ಓದಲಾದ ಕ್ರಮಸಂಖ್ಯೆ (17) ರ ಪತ್ರದಲ್ಲಿ ಗುಲ್ಬರ್ಗ ಜಿಲ್ಲೆಯಲ್ಲಿ ನೀಡಿರುವ ಜಾತಿ ಪ್ರಮಾಣ ಪತ್ರ ಖೋಟಾ ಪ್ರಮಾಣ ಪತ್ರಗಳಾಗಿದ್ದು ಈ ಪ್ರಮಾಣ ಪತ್ರಗಳ ಮೇಲಿರುವ ತಹಶೀಲ್ದಾರರ ಸಹಿಗಳು ಫೋರ್ಜರಿಯಾಗಿದ್ದು, ಈ ಆಪಾದಿತ ಅಧಿಕಾರಿಗಳ ವಿರುದ್ಧ ದೋಷಾರೋಪಣೆ ಕಳಿಸಬೇಕೆ ಎಂಬ ಬಗ್ಗೆ ಸರ್ಕಾರದ ನಿರ್ದೇಶನವನ್ನು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (18) ರ ಪತ್ರದಲ್ಲಿ ಬೀದರ್ ಜಿಲ್ಲಾಧಿಕಾರಿಯವರು ಕರಡು ದೋಷಾರೋಪಣ ಪಟ್ಟಿಯನ್ನು ಅನುಬಂಧ 1 ರಿಂದ 4ನ್ನು ತಯಾರಿಸಿ ಸಲ್ಲಿಸಿರುತ್ತಾರೆ. ಆದರೆ ಇದಕ್ಕೆ ಸಂಬಂಧಿಸಿದಂತೆ ಪೂರಕ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ.

ಮೇಲೆ ಓದಲಾದ ಕ್ರಮಸಂಖ್ಯೆ (19) ರ ಪತ್ರದಲ್ಲಿ ಕೋಲಾರ ಜಿಲ್ಲಾಧಿಕಾರಿಯವರು ಕರಡು ದೋಷಾರೋಪಣ ಪಟ್ಟಿಯನ್ನು ಅನುಬಂಧ 1 ರಿಂದ 4ನ್ನು ತಯಾರಿಸಿ ಸಲ್ಲಿಸಿರುತ್ತಾರೆ. ಆದರೆ ಇದಕ್ಕೆ ಸಂಬಂಧಿಸಿದಂತೆ ಪೂರಕ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ.

ಮೇಲೆ ಓದಲಾದ ಕ್ರಮಸಂಖ್ಯೆ (20) ರ ಪತ್ರದಲ್ಲಿ ಗುಲ್ಬರ್ಗ ಜಿಲ್ಲಾಧಿಕಾರಿಯವರು ಅವರ ಜಿಲ್ಲೆಯಿಂದ ನೀಡಿರುವ ಜಾತಿ ಪ್ರಮಾಣ ಪತ್ರ ಖೋಟಿಯ ಪ್ರಮಾಣ ಪತ್ರಗಳಾಗಿದ್ದು ಸದರಿ ಜಾತಿ ಪ್ರಮಾಣ ಪತ್ರಗಳನ್ನು ಗುಲ್ಬರ್ಗ ತಾಲ್ಲೂಕು ಕಛೇರಿಯಿಂದ ನೀಡಿರುವ ಬಗ್ಗೆ ಆ ಸಾಲಿನ ವಹಿಗಳಲ್ಲಿ ದಾಖಲಾತಿ ಇರುವುದಿಲ್ಲ. ಹಾಗೂ ಜಾತಿ ಪ್ರಮಾಣ ಪತ್ರಗಳ ಮೇಲೆ ತಾಲ್ಲೂಕು ಕಛೇರಿಯ ಕೇಸ್ ನಂಬರ್ ಇರುವುದಿಲ್ಲ ಹಾಗೂ ಪ್ರಮಾಣ ಪತ್ರಗಳ ಮೇಲೆ ದುಂಡು ಸೀಲು ತಾಲ್ಲೂಕು ಕಛೇರಿಯ ಸೀಲಿಗೆ ಸರಿ ಹೊಂದುತ್ತಿಲ್ಲ, ಮುದ್ರೆಗಳ ವ್ಯಾಸದಲ್ಲಿ ವ್ಯತ್ಯಾಸವಿದೆಯೆಂದು ತಿಳಿಸುತ್ತಾ ಈ ಅಧಿಕಾರಿಗಳ ವಿರುದ್ಧ ದೋಷಾರೋಪಣ ಪಟ್ಟಿ ಸಿದ್ದಪಡಿಸಬೇಕೆ ಎಂಬ ಬಗ್ಗೆ ಮತ್ತೊಮ್ಮೆ ಸ್ಪಷ್ಟೀಕರಣ ಬಯಸಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (21) ರ ಪತ್ರದಲ್ಲಿ ರಾಯಚೂರು ಜಿಲ್ಲಾಧಿಕಾರಿಯವರು ಕರಡು ದೋಷಾರೋಪಣ ಪಟ್ಟಿಯನ್ನು ಅನುಬಂಧ 1 ರಿಂದ 4ನ್ನು ತಯಾರಿಸಿ ಸಲ್ಲಿಸಿರುತ್ತಾರೆ. ಆದರೆ ಇದಕ್ಕೆ ಸಂಬಂಧಿಸಿದಂತೆ ಪೂರಕ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ.

ಮೇಲೆ ಓದಲಾದ ಕ್ರಮಸಂಖ್ಯೆ (22) ರ ಪತ್ರದಲ್ಲಿ ಕಾರಣ ಕೇಳುವ ನೋಟೀಸನ್ನು ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳ ಅಧಿಕಾರಿ/ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕಾರಣ ಕೇಳುವ ನೋಟಿಸನ್ನು ಜಾರಿಮಾಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (23) ರ ಪತ್ರದಲ್ಲಿ ಬೆಳಗಾಂ ಜಿಲ್ಲೆಯ 20 ಪ್ರಕರಣಗಳಲ್ಲಿ ಕೋರ್ಟ್ ಅದೇಶದ ಮೇರೆಗೆ ಜಾತಿ ದೃಢೀಕರಣ ಪತ್ರ ನೀಡಿರುವುದರಿಂದ ಮುಂದಿನ ಕ್ರಮ ಜರುಗಿಸುವುದನ್ನು ಸರ್ಕಾರ ಕೈಬಿಡಲಾಗಿದೆ ಎಂದು ತಿಳಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (24) ರ ಪತ್ರದಲ್ಲಿ ರಾಯಚೂರು/ಕೊಪ್ಪಳ ಜಿಲ್ಲೆಗೆ ಸೇರಿದ ಅಧಿಕಾರಿ/ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ದೋಷಾರೋಪಣ ಪಟ್ಟಿಯನ್ನು ಅನುಬಂಧ 1 ರಿಂದ 4ನ್ನು ಸಿದ್ದಪಡಿಸಿ ಸಂಬಂಧ ಪಟ್ಟ ದಸ್ತಾವೇಜಿನೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಕೋರಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (25) ರಲ್ಲಿ ಸರ್ಕಾರವು ಬಯಸಿರುವ ಪ್ರಕರಣವು ಕೊಪ್ಪಳ ಜಿಲ್ಲೆಗೆ ಸಂಬಂಧಿಸಿರುವುದರಿಂದ ಸರ್ಕಾರದ ನಿರ್ದೇಶನದನ್ವಯ ಕೊಪ್ಪಳ ಜಿಲ್ಲೆಯ ಅಧಿಕಾರಿ/ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ದೋಷಾರೋಪಣ ಪಟ್ಟಿಯನ್ನು ಅನುಬಂಧ 1 ರಿಂದ 4ನ್ನು ಸಿದ್ದಪಡಿಸಿ ಸಂಬಂಧ ಪಟ್ಟ ದಸ್ತಾವೇಜಿನೊಂದಿಗೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಕೊಪ್ಪಳ ಜಿಲ್ಲಾಧಿಕಾರಿಯವರಿಗೆ ಪತ್ರ ಬರೆದಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (26) ರ ಪತ್ರದಲ್ಲಿ ಗದಗ್ ಜಿಲ್ಲೆಯ ಗದಗ್ ತಹಶೀಲ್ದಾರರು ಶ್ರೀ ಈಶ್ವರಯ್ಯ ಬಸಯ್ಯ ಹಿರೇಮಠ್ ಎಂಬುವವರಿಗೆ ಜಾತಿ ಪ್ರಮಾಣ ಪತ್ರ ನೀಡಿರುವುದಿಲ್ಲ. ಆದ್ದರಿಂದ ಆ ಅಧಿಕಾರಿ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (27) ರಲ್ಲಿ ಗದಗ್ ಜಿಲ್ಲಾಧಿಕಾರಿಗಳಿಗೆ ಪತ್ರ ಬರೆದು ತಹಶೀಲ್ದಾರರು ಜಾತಿ ಪ್ರಮಾಣ ಪತ್ರ ಹೊರಡಿಸಿರುವ ಬಗ್ಗೆ ದಾಖಲಾತಿಗಳನ್ನು ಇಡಬೇಕಾಗಿದ್ದು, ಈ ಜಾತಿ ಪ್ರಮಾಣ ಪತ್ರಗಳು ಖೋಟಾ ಪ್ರಮಾಣ ಪತ್ರಗಳೆ ಎಂಬ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಪರಿಪೂರ್ಣವಾದ ವರದಿ ಹಾಗೂ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಕೋರಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (28) ರ ಪತ್ರದಲ್ಲಿ ಕೊಪ್ಪಳ ಜಿಲ್ಲೆಯ ವ್ಯಾಪ್ತಿಗೆ ಸಂಬಂಧಿಸಿದಂತೆ ಜಾತಿ ಪ್ರಮಾಣ ಪತ್ರಗಳನ್ನು ಕೋರ್ಟ್ ಅದೇಶದ ಮೇರೆಗೆ ಜಾತಿ ದೃಢೀಕರಣ ಪತ್ರ ನೀಡಿರುವುದರಿಂದ ಸಿಬ್ಬಂದಿ/ಅಧಿಕಾರಿ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಬಿಡುವುದು ಸೂಕ್ತವೆಂದು ಹಾಗೂ ಅವರ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (29) ರ ಆದೇಶದಲ್ಲಿ ಕೊಪ್ಪಳ ಜಿಲ್ಲೆಯ ಜಿಲ್ಲಾಧಿಕಾರಿಯವರ ಶಿಫಾರಸ್ಸಿನ ಮೇರೆಗೆ ಹಾಗೂ ಕೋರ್ಟ್ ಅದೇಶದ ಮೇರೆಗೆ ಜಾತಿ ದೃಢೀಕರಣ ಪತ್ರ ನೀಡಿರುವುದರಿಂದ ಮುಂದಿನ ಕ್ರಮ ಜರುಗಿಸುವುದನ್ನು ಸರ್ಕಾರ ಕೈಬಿಡಲಾಗಿದೆ ಹಾಗೂ ಅವರ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಎಲ್ಲಾ ಉದ್ದೇಶಗಳಿಗಾಗಿ ಕರ್ತವ್ಯದ ಅವಧಿ ಎಂದು ಪರಿಗಣಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (30) ರ ಸರ್ಕಾರಿ ಪತ್ರದಲ್ಲಿ ಕೋಲಾರ ಜಿಲ್ಲೆಯ ಹಿಂದಿನ ತಹಶೀಲ್ದಾರ್‌ರವರ ವಿರುದ್ಧ ಎಸ್. ಕೃಷ್ಣಪ್ಪ ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಸಿ.ಆ.ಸು ಇಲಾಖೆ ಕೈಬಿಟ್ಟಿರುವುದಾಗಿಯೂ ಇನ್ನುಳಿದ ನೌಕರರು ಸಿ ಗುಂಪಿನ ನೌಕರರಾಗಿದ್ದು ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಜಿಲ್ಲಾದಿಕಾರಿಗಳಿಗೆ ಅಧಿಕಾರವಿರುವುದರಿಂದ ಸದರಿ ನೌಕರರ ವಿರುದ್ಧ ಜಾರಿ ಮಾಡಲಾದ ದೋಷಾರೋಪಣೆ ಪಟ್ಟಿ ಹಾಗೂ ನೌಕರರು ಸಲ್ಲಿಸಿರುವ ಲಿಖಿತ ಸಮಜಾಯಷಿಗಳ ಜೆರಾಕ್ಸ್ ಪ್ರತಿಗಳನ್ನು ಕಳುಹಿಸಿಕೊಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (31) ರ ಪತ್ರದಲ್ಲಿ ಬೀದರ್ ಜಿಲ್ಲಾಧಿಕಾರಿಗಳಿಗೆ ಪತ್ರ ಬರೆದು ಅನುಬಂಧ 3ಕ್ಕೆ ಪೂರಕವಾದ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲ ಸದರಿ ದಾಖಲಾತಿಗಳನ್ನು ಸಲ್ಲಿಸುವಂತೆ ಕೋರಿ ನೆನಪೋಲೆ ಪತ್ರವನ್ನು ಬರೆಯಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (32) ರ ಸರ್ಕಾರಿ ಪತ್ರದಲ್ಲಿ ತಹಶೀಲ್ದಾರರು ದಿನಾಂಕ; 30.11.1994ರಂದು ಸೇವೆಯಿಂದ ನಿವೃತ್ತರಾಗಿರುವುದರಿಂದ ಹಾಗೂ ಘಟನೆಯು ನಡೆದು 4 ವರ್ಷಗಳಿಗಿಂತ ಹೆಚ್ಚಿನ ಅವಧಿಯಾಗಿರುವುದರಿಂದ ಆ ಅಧಿಕಾರಿಯ ವಿರುದ್ದ ಶಿಸ್ತು ಕ್ರಮ

ಜರುಗಿಸುವ ಪ್ರಕ್ರಿಯೆಯನ್ನು ಕೈಬಿಡಲಾಗಿದೆ ಉಳಿದ ಗ್ರೂಪ್–ಸಿ ನೌಕರರಿಂದ ಶಿಸ್ತು ಕ್ರಮ ಜರುಗಿಸುವುದನ್ನು ತಹಶೀಲ್ದಾರರೇ ಕೈಗೊಂಡ ಕ್ರಮದ ಬಗ್ಗೆ ಮಾಹಿತಿಯನ್ನು ಒದಗಿಸುವಂತೆ ಕೋರಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (33) ರ ಪತ್ರದಲ್ಲಿ ಕೋಲಾರ, ಬೀದರ್ ಹಾಗೂ ರಾಯಚೂರು ಜಿಲ್ಲಾಧಿಕಾರಿಗಳಿಗೆ ನೆನಪೋಲೆ ಪತ್ರಗಳನ್ನು ಬರೆದು ಮಾಹಿತಿಯನ್ನು ಒದಗಿಸುವಂತೆ ಕೋರಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (34) ರಲ್ಲಿ ಕೋಲಾರ ಜಿಲ್ಲಾದಿಕಾರಿಗಳು ಸಿ ವರ್ಗದ ನೌಕರರ ವಿರುದ್ಧ ಶಿಸ್ತಿನ ಕ್ರಮ ಜರುಗಿಸಿ ಅವರ ವಿರುದ್ಧ ದಂಡನೆಯನ್ನು ವಿಧಿಸಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (35) ರ ಅರೆ ಸರ್ಕಾರಿ ಪತ್ರವನ್ನು ಕೋಲಾರ, ರಾಯಚೂರು ಮತ್ತು ಬೀದರ್ ಜಿಲ್ಲಾಧಿಕಾರಿಗಳಿಗೆ ಪತ್ರ ಬರೆದು ಕೂಡಲೇ ಆ ನೌಕರರ ವಿರುದ್ಧ ಇಲಾಖಾ ವಿಚಾರಣೆ ಹೂಡಲು ಮತ್ತು ಕೈಗೊಂಡ ಕ್ರಮದ ಬಗ್ಗೆ ಮಾಹಿತಿ ಒದಗಿಸಲು ಕೋರಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (36) ರ ಪತ್ರದಲ್ಲಿ ಕಾರಣ ಕೇಳುವ ನೋಟೀಸನ್ನು ದೋಷಾರೋಪಣ ಪಟ್ಟಿ ಅನುಬಂಧ 1 ರಿಂದ 4ನ್ನು ದಸ್ತಾವೇಜಿನೊಂದಿಗೆ ಜಾರಿಮಾಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (37)ರಲ್ಲಿ ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಅವರ ಕರ್ನಾಟಕ ನಾಗರೀಕ ಸೇವೆ ನಿಯಮ 214(2)(ಬಿ) ರಲ್ಲಿ ಕಲ್ಪಿಸಿರುವ ಅವಕಾಶದನ್ವಯ ಹಾಗೂ ದಿನಾಂಕ:30.06.2000 ರಂದು ವಯೋನಿವೃತ್ತಿ ಹೊಂದಿರುವುದರಿಂದ ಹಾಗೂ ಶ್ರೀಯುತರು ನೀಡಿರುವ ಸುಳ್ಳು ಜಾತಿ ಪ್ರಮಾಣ ಪತ್ರವನ್ನು ತಕ್ಷಣ ರದ್ದುಗೊಳಿಸಿದ್ದು, ಈ ಪ್ರಕರಣದಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲವಾದ್ದರಿಂದ ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಿ ದಿನಾಂಕ:13.07.1996 ರಿಂದ 09.10.1996 ರವರಗೆ ಕರ್ತವ್ಯದ ಅವಧಿ ಎಂದು ಪರಿಗಣಿಸುವಂತೆ ಕೋರಿರುತ್ತಾರೆ.

ಸರ್ಕಾರವು ಮೇಲ್ಕಂಡ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಮೊಹಮ್ಮದ್ ಫಯಾಜ್ಆಲಿ ರವರು ನಿವೃತ್ತರಾಗುವ ದಿನಾಂಕಕ್ಕಿಂತ ನಾಲ್ಕು ವರ್ಷ ಮೊದಲೇ ಘಟಿಸಿರುವುದರಿಂದ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮ 214 ರಡಿಯಲ್ಲಿ ಪ್ರಸ್ತುತ ಶಿಸ್ತು ಕ್ರಮ ಜರುಗಿಸಲು ಅವಕಾಶವಿಲ್ಲದ ಕಾರಣ ಅವರನ್ನು ಆರೋಪಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಆರ್‌ಡಿ 60 ಎಡಿಇ 2010 ದಿನಾಂಕ:03.07.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ.ಮಹಮದ್ ಫಯಾಜ್ ಅಲಿ, ನಿವೃತ್ತ ತಹಶೀಲ್ದಾರ್, ಬಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ, ಅವರ ವಿರುದ್ಧ ಸರ್ಕಾರಿ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆರ್‌ಡಿ 60 ಎಡಿಇ 2010 ದಿನಾಂಕ; 29.01.2011ರಲ್ಲಿ ಮಾಡಲಾದ ಆರೋಪಗಳಿಂದ ಅವರನ್ನು ದೋಷಮುಕ್ತರನ್ನಾಗಿಸಿ ಆದೇಶಿಸಿದೆ.

ಶ್ರೀ.ಮಹಮದ್ ಫಯಾಜ್ ಅಲಿ, ನಿವೃತ್ತ ತಹಶೀಲ್ದಾರ್, ಬಾಲ್ಕಿ ತಾಲ್ಲೂಕು, ಬೀದರ್ ಜಿಲ್ಲೆ, ಅವರು ಈ ಪ್ರಕರಣದ ಮಟ್ಟಿಗೆ ವಿಚಾರಣೆ ನಡೆಯದಿದ್ದಲ್ಲಿ ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3).

**ಪಿ.ಆರ್. 1960**